

# ಸಿದ್ಧಗಂಗಾ



ಅಕ್ಟೋಬರ್ ೨೦೦೭

ಸಂಪುಟ : ೩೮ ಸಂಚಿಕೆ : ೧೦




ಸೆಪ್ಟೆಂಬರ್ ೯ರಂದು ನೆಲಮಂಗಲ ತಾಲ್ಲೂಕು ಡಾಬಸ್‌ಪೇಟೆಯಲ್ಲಿ ಶ್ರೀ ಸಿದ್ಧಲಿಂಗೇಶ್ವರ ಸಮುದಾಯ ಭವನವನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಪರಮಪೂಜ್ಯ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶೀಕೇಂದ್ರ ಮಹಾಸ್ವಾಮಿಗಳು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು.





ಸಾಮಾಜಿಕ ರೋಗರುಜಿನಗಳಿಗೆ ಸಿದ್ಧೌಷಧ,
ಸಂಜೀವಿನಿ ಶಕ್ತಿ ಶಿಕ್ಷಣ
— ಮಹಾತ್ಮ ಗಾಂಧೀಜಿ







ಮುಖಪುಟ

ಶ್ರೀ ಸಿದ್ಧಲಿಂಗೇಶ್ವರ ಸಮುದಾಯ ಭವನ ಉದ್ಘಾಟನೆ

ಮಹಾತ್ಮ ಗಾಂಧೀಜಿ



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೮ ಅಕ್ಟೋಬರ್ ೨೦೦೨ ಸಂಚಿಕೆ : ೧೦

## ಒಳಪುಟಗಳಲ್ಲಿ ..........




ಪ್ರಧಾನ ಸಂಪಾದಕ
ಪ. ಚೆನ್ನಪ್ಪ ಎರೇಸೀಮೆ

ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೪
ದೂರವಾಣಿ : ೩೬೦೪೦೮೭


ಲೇಖಕರ ಅಭಿಪ್ರಾಯಗಳು ಪತ್ರಿಕೆಯ ಅಭಿಪ್ರಾಯಗಳಲ್ಲ


ವಿಳಾಸ :
"ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಚಂದಾ ವಿವರ :

| | |
|---|---|
| ವಾರ್ಷಿಕ ಚಂದಾ | ರೂ. ೧೦೦/– |
| ಆಜೀವ ಸದಸ್ಯತ್ವ | ರೂ. ೫೦೦/– |
| ಬಿಡಿ ಪ್ರತಿ | ರೂ. ೧೦.೦೦ |



## ಗಾಂಧೀ ಜಯಂತಿ.......

ಅಕ್ಟೋಬರ್ ಎರಡು ಗಾಂಧೀಜಿಯವರ ಜನ್ಮದಿನ. ವಿಶ್ವದ ವಿಸ್ಮಯವೊಂದು ಕಣ್‌ತೆರೆದ ಶುಭದಿನ. ಹಿಂಸೆಯನ್ನು ಅಹಿಂಸೆಯಿಂದ ಗೆಲ್ಲಲೆಂದೇ ತತ್ವವೊಂದು ಆಕಾರಗೊಂಡ ಪವಿತ್ರದಿನ. ವರ್ಣದ್ವೇಷವನ್ನು ಶಾಂತಿ, ಸಹನೆಗಳಿಂದ ಸುಧಾರಿಸಿ ತಲೆಯೆತ್ತಿದ ಪುಣ್ಯದಿನ. ಗಾಂಧೀಜಿಯವರು ಗಗನದಿಂದಿಳಿದು ಬಂದವರಲ್ಲ, ಭೂಮಿ ಬಾಯ್ತೆರೆದು ಎದ್ದು ಬಂದವರಲ್ಲ. ಎಲ್ಲ ಸುಖ-ದುಃಖಗಳ, ಕೋಪತಾಪಗಳ, ಕಾಮಪ್ರೇಮಗಳ, ರಾಗ-ಭಾವಗಳ, ದೈನ್ಯ-ದೌರ್ಬಲ್ಯಗಳು ಮಾನವ ವಿಕಾರ-ವಿವೇಕಗಳ ಮಧ್ಯದಿಂದ ಎಂದು ಬಂದವರು. ಜಗತ್ತಿನಲ್ಲಿ ಎಲ್ಲ ಧರ್ಮತತ್ವಗಳ ಅಧ್ಯಯನದ ಅಮೃತಫಲವಾಗಿ ಪ್ರಿಯವಾದವರು. ದೇಶ ಕಾಲಾತೀತರಾದವರ ಸಾಲಿನಲ್ಲಿ ನಿಂತವರು. ಬುದ್ಧ, ಬಸವ, ಏಸು, ಪೈಗಂಬರ್ ಸಂದೇಶ ಸಿರಿಯನ್ನು ಬಿತ್ತಿದರು. ಸತ್ಯವನ್ನು ನಂಬಿ ನಡೆದರು. ಸತ್ಯಕ್ಕಾಗಿ ಆಗ್ರಹವನ್ನು ಮಾಡಿದರು. ಹರಿಯನ್ನು ಭಜಿಸಿದರು. ಹರಿಜನರ ಉದ್ಧಾರಕ್ಕಾಗಿ ದುಡಿದರು. ಅರಿವಿನ ತೊರೆಯೆನಿಸಿದರು.ಅನುಭಾವದ ಅರವಟಿಗೆಯಾದರು. ರಾಜಕಾರಣಿ, ಪತ್ರಿಕೋದ್ಯಮಿ, ಸಮಾಜ ವಿಜ್ಞಾನಿ, ಸರ್ವೋದಯ ನೇತಾರ, ಶಿಕ್ಷಣತಜ್ಞ, ಸಾಹಿತ್ಯರತ್ನ, ತತ್ವಜ್ಞಾನಿ, ಹಾಸ್ಯಗಂಭೀರ, ಸ್ವದೇಶಿನಿಷ್ಠ, ಅರೆಬೆತ್ತಲೆಯ ಫಕೀರ – ಎಂದೆಲ್ಲಾ ಹೆಸರಾದ ಗಾಂಧೀಜಿ ಮಾನವೀಯತೆಯ ಮಂಗಳರೂಪ.

ಗಾಂಧೀಜಿಯಿಂದ ಭಾರತಕ್ಕೆ ಮರ್ಯಾದೆ, ಗೌರವ. ಅವರ ಸ್ಮರಣೆಯಿಂದ ಸ್ಫೂರ್ತಿ. ಅವರ ಸಂದೇಶ ಪಾಲನೆಯಿಂದ ಜೀವನಕ್ಕೆ ನೆಮ್ಮದಿ. ಅವರು ತೋರಿದ ದಾರಿಯಲ್ಲಿ ಹೆಜ್ಜೆಯಿಡುವುದೇ ಭಾರತೀಯರಿಗೆ ಸಮೃದ್ಧಿ. ಆದರೆ ಗಾಂಧೀಜಿಯೆಂದರೆ ಯಾವ ಗಾಂಧಿ? ಎಂದು ಕೇಳುತ್ತಾರೆ. ಇಂದಿನ ಯುವಜನತೆ ಅವರಿಗೆ ಗೊತ್ತಿರುವ ಗಾಂಧಿಗಳೆಂದರೆ ಇತ್ತೀಚಿನವರು. ಸತ್ಯ, ಅಹಿಂಸೆಗಳ ಪ್ರೇಮಮೂರ್ತಿ. ಗಾಂಧಿಯವರನ್ನು ಕಾಣರು. ಕೇಳರು. ಅವರ ಜೀವನಪರಿಚಯ ಇವರಿಗಿಲ್ಲ. ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಆ ಪುಣ್ಯಾತ್ಮನನ್ನು ವಿದ್ಯಾರ್ಥಿಗಳಿಗೆ ಪರಿಚಯಿಸುವ ಯೋಜನೆಗಳಾಗಲಿಲ್ಲ. ಆ ಮಹಾತ್ಮನ ಫೋಟೋಗಳನ್ನು ಮಾತ್ರ ಗಾಂಧಿ ಜಯಂತಿಯಂದು ಅನಾವರಣ ಮಾಡುವ, ಹಾರ ಹಾಕಿ, ಗಂಧದಕಡ್ಡಿ ಹಚ್ಚಿ, ಕರ್ಪೂರದಾರತಿ ಬೆಳಗುವುದು ಮಾತ್ರ ನಡೆದಿದೆ. ನೆನಪಾಗುತ್ತದೆ ಇಲ್ಲಿ ಕವಿ ಶಿವರುದ್ರಪ್ಪನವರ ಕವಿತೆಯೊಂದು. ''ಅನಾವರಣವಾಯಿತಂತೆ ಗಾಂಧೀಜಿಯ ಚಿತ್ರಕೆ, ಸತ್ತ ಗಾಂಧಿ ಅತ್ತನೇನೋ ನಡೆದ ಈ ವಿಚಿತ್ರಕೆ'' ಎನ್ನುತ್ತದೆ ಕವಿವಾಣಿ. ಮುಂದುವರಿದು ಹೇಳುತ್ತಾರೆ ಕವಿ'' ಅನಾವರಣವಾಗಬೇಕು ಮೊದಲು ನಮ್ಮ ಹೃದಯಕೆ, ಅನಾವರಣವಾದ ಮೇಲೆ ಸಿದ್ಧವಾಗು ಶಿಕ್ಷೆಗೆ'' ಎನ್ನುತ್ತಾರೆ.

ಹೌದು, ಮೊದಲಾಗಬೇಕಾದುದು ನಮ್ಮ ಹೃದಯದ ಅನಾವರಣ. ಆತ್ಮಾವಲೋಕನ. ಗಾಂಧೀಜಿಯವರು ನುಡಿದು-ನಡೆದು ತೋರಿಸಿದ ಸರಳ ಸತ್ಯಶುದ್ಧ ಕಾಯಕಬದ್ಧ ಜೀವನವನ್ನು ಅನುಸರಿಸುವುದೇ ನಾವು ಆ ಪುಣ್ಯ ಪುರುಷನಿಗೆ ಸಲ್ಲಿಸಬಹುದಾದ ಪ್ರೀತಿಯ ಕಾಣಿಕೆ.

– ಸಂಪಾದಕ







## ಸರಳ ಜೀವನ

ಸ್ವಾತಂತ್ರ್ಯ ಬಂದು ಅರ್ಧಶತಮಾನವೇ ಕಳೆದು ಹೋಗಿದೆ. ಕಾಲಚಕ್ರ ಉರುಳುತ್ತಲೇ ಇದೆ. ರಾಷ್ಟ್ರದ ನದಿಗಳಲ್ಲಿ ಕಲ್ಪಿಸಲಾಗದಷ್ಟು ನೀರು ಹರಿದು ಹೋಗಿದೆ. ಆದರೆ ಭಾರತೀಯ ಸಮಸ್ಯೆಗಳ ಸುಳಿಯ ಮಧ್ಯೆ ನರಳುವಂತಾಗಿದ್ದಾನೆ. ಪ್ರಜಾಪ್ರಭುತ್ವವೆಂದರೆ ಸರ್ವರ ಶ್ರಮ, ಸರ್ವರ ಪ್ರಗತಿ, ಪ್ರತಿಭಾ ಸಂಪನ್ನ ಮುಖಂಡತ್ವವೆಂಬ ಸೂತ್ರ ಕಾರ್ಯಗತವಾಗಿಲ್ಲ. ದುಡಿಯಬೇಕು ಎಂಬ ಮನೋಧರ್ಮ ಯಾರಲ್ಲಿಯೂ ಕಾಣುತ್ತಿಲ್ಲ. ಸರ್ಕಾರದಿಂದ ಸ್ಥಾಪಿತವಾದ ಕಾರ್ಖಾನೆಗಳು ಮುಚ್ಚುವ ಅಂಚಿಗೆ ಬಂದು ನಿಂತಿವೆ. ಕಾರ್ಮಿಕರು ಹಕ್ಕಿಗಾಗಿ ಚಳುವಳಿ ಮಾಡಿದ್ದಾರೆ. ಆಡಳಿತ ಮಂಡಳಿಗಳು ನಷ್ಟದ ನಿಟ್ಟುಸಿರು ಬಿಡುತ್ತ ಅಸಹಾಯಕತೆಯನ್ನು ವ್ಯಕ್ತಪಡಿಸುತ್ತಿವೆ. ಕೆಲಸಗಾರರಿಗೆ ಸಂಬಳ ಕೊಡಲಾರದ ಸ್ಥಿತಿಗೆ ಬಂದಿವೆ. ಸಾಲ ತಂದು ಆಸ್ತಿಪಾಸ್ತಿ ಮಾಡಿ ವೇತನ ಪಾವತಿ ವ್ಯವಸ್ಥೆ ನಡೆದಿದೆ. ಸ್ವಯಂ ನಿವೃತ್ತಿ ಯೋಜನೆ ಜಾರಿಗೆ ಬಂದಿದೆ. ಸಾವಿರಾರು ಕಾರ್ಮಿಕರು ಈ ಯೋಜನೆಯನ್ವಯ ನಿವೃತ್ತರಾಗಿದ್ದಾರೆ. ಆಗುವವರು ಅರ್ಜಿ ಹಿಡಿದು ಕ್ಯೂ ನಿಂತಿದ್ದಾರೆ. ನಂಬಿಕೊಂಡಿದ್ದ ಕುಟುಂಬಗಳು ದಿಕ್ಕು ತೋಚದಂತಹ ಪರಿಸ್ಥಿತಿಯಲ್ಲಿ ಮೂಗುಬ್ಬಸಕ್ಕೊಳಗಾಗಿವೆ. ಅವಕಾಶವನ್ನು ಸದುಪಯೋಗಮಾಡಿಕೊಳ್ಳಲಿಲ್ಲ. ಆಡಳಿತ ಮಂಡಳಿಯವರು ದೂರದೃಷ್ಟಿಯವರಾಗಲಿಲ್ಲ, ಕಾರ್ಮಿಕರು ಉತ್ಪಾದನೆಯನ್ನು ಹೆಚ್ಚಿಸುವ ನಿಷ್ಠೆ ತೋರಲಿಲ್ಲ. ರಾಷ್ಟ್ರ ಕಟ್ಟುವ ಮಾತೆಲ್ಲಿ ಬಂತು? ವಿಶ್ವದೆಲ್ಲೆಡೆಯಿಂದ ಸಾಲ ತಂದಾಗಿದೆ. ಸಾಲದ ಮೇಲೆ ಸಾಲ ಕೊಡಬೇಕಾಗಿರುವ ಬಡ್ಡಿ ಹಣವೇ ಸಾವಿರ ಸಾವಿರ ಕೋಟಿ ರೂ.ಗಳು. ಜಾಗತೀಕರಣ, ಉದಾರೀಕರಣಗಳೆಂಬ ಔದಾರ್ಯದ ಉರುಳಿಗೆ ಕೊರಳೊಡ್ಡಿರುವ ಇಕ್ಕಟ್ಟು ಬಿಕ್ಕಟ್ಟು, ಆಳುವ ಪ್ರತಿನಿಧಿಗಳಿಗೆ ಇಚ್ಛಾಶಕ್ತಿಯ ಅಭಾವ. ಗಾಂಧೀಜಿಯವರು ಕನಸಿದ್ದ ಭಾರತ ನಿರ್ಮಾಣವಾಗಲೇ ಇಲ್ಲ. ಅವರನ್ನು ಮರೆತೇ ಬಿಟ್ಟಿದ್ದಾಗಿದೆ. ಅವರು ರೂಪಿಸಿದ ತತ್ವಗಳ ಅನುಷ್ಠಾನವಿಲ್ಲ. ಗೃಹಕೈಗಾರಿಕೆಗಳಿಗೆ ಒತ್ತು ಕೊಡಲಿಲ್ಲ, ಖಾದಿ ಗ್ರಾಮೋದ್ಯೋಗಕ್ಕೆ ಪ್ರಾಶಸ್ತ್ಯವಿಲ್ಲ. ಪಾನನಿರೋಧವಂತೂ ಬರಲೇ ಇಲ್ಲ. ಸರಳ ಜೀವನಶೈಲಿ ಜನನಾಯಕರದಾಗಲಿಲ್ಲ. ಶಿಕ್ಷಣವಂತೂ ಮಾನವೀಯತೆಯನ್ನು ರೂಪಿಸುವಂತಾಗಲಿಲ್ಲ. ದೇಶೀಯ ಸಂಸ್ಕೃತಿಯ ಗಂಧಗಾಳಿಯಿಲ್ಲದ ಯುವಜನತೆಯನ್ನಷ್ಟೇ ಉತ್ಪಾದಿಸುವ ವಿಜ್ಞಾನ-ತಂತ್ರಜ್ಞಾನದ ಯೋಜನೆಗಳು. ಸ್ಥಳೀಯ ಇತಿಹಾಸ ಜ್ಞಾನವಿಲ್ಲದ ಶಿಕ್ಷಣ. ಪರಂಪರೆಯ ಅರಿವಿಲ್ಲದ ಯುವಜನತೆ ಸ್ವಾತಂತ್ರ್ಯಕ್ಕಾಗಿ ಪ್ರಾಣಾರ್ಪಣೆ ಮಾಡಿದ ದೇಶಭಕ್ತರ ಸ್ಮರಣೆಗೈಯ್ಯದ ಜನಸಂಖ್ಯೆ. ರಾಷ್ಟ್ರಪ್ರೇಮವಿಲ್ಲದ ಅಕ್ಷರಸ್ಥರು. ಭ್ರಷ್ಟಾಚಾರವನ್ನು ಹುಲುಸಾಗಿ ಬೆಳೆಸಿದ ರಾಜಕೀಯ ವ್ಯವಸ್ಥೆ. ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲೆ ನಾಯಕತ್ವವನ್ನು ವಹಿಸಿಕೊಂಡ ನಿಸ್ವಾರ್ಥ ಚೇತನಗಳು ಆಶಾಭಾವನೆಯನ್ನುಂಟುಮಾಡಿದ್ದರು. ಅನಂತರ ಬಂದ ಹಣ, ಅಧಿಕಾರ, ಭೋಗಜೀವನ ದಾಹಿಗಳು, ಗಾಂಧೀಜಿಯವರ ಕನಸನ್ನೆಲ್ಲಾ ಗಾಳಿಗೆ ತೂರಿರುವುದು ಸೂರ್ಯ ಪ್ರಕಾಶದಷ್ಟು ನಿಚ್ಚಳ. ಜಗತ್ತಿಗೇ ಆದರ್ಶವೆನಿಸಿದ ರಾಷ್ಟ್ರವಾಗಿತ್ತು ಭಾರತ. ಆದರೇನಾಗಿದೆ ಇಂದು? ಯಾವ ರಾಜಕೀಯ ಪಕ್ಷವೇ ಆಗಲಿ ಅಧಿಕಾರಕ್ಕೆ ಬಂದರು ಏನೂ ಮಾಡಲಾಗದಂತಹ ಅಸಹಾಯಕ ಸ್ಥಿತಿ ನಿರ್ಮಾಣವಾಗಿದೆ. ಇದಕ್ಕಿರುವ ಪರಿಹಾರ ಒಂದೇ. ದೇಶದ ಆ ಬಾಲವೃದ್ಧರಾದಿಯಾಗಿ ರಟ್ಟೆಮುರಿದು ದುಡಿಯಬೇಕು, ದುಡಿಮೆಯೊಂದೇ ಮಂತ್ರ. ಯಾವ ಪವಾಡ ದಿಂದಲೂ ದೇಶ ಎದ್ದು ನಿಲ್ಲಲಾರದು. ಜನನಾಯಕರು, ಆಡಳಿತ ಸೂತ್ರ ಹಿಡಿದಿರುವವರು ಸರಳ ಜೀವನ ಸೂತ್ರ ಅನುಸರಿಸಬೇಕು. ಭೋಗ, ವೈಭವಗಳಿಂದ ದೂರನಿಲ್ಲಬೇಕು. ರಾಷ್ಟ್ರವನ್ನು ಸಮಸ್ಯೆಗಳ ಸುಳಿಯಿಂದ ಮೇಲಕ್ಕೆತ್ತುವ ನಿಸ್ವಾರ್ಥ ಸಾಹಸಿಗಳಾಗಬೇಕು. ಅಭಿಮಾನಧನರಾಗಿ ಸೇವಾ ಮುಖಿಗಳಾಗಬೇಕು. ❄

ಓಂ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಚಂದ್ರಮನೊಳಗಣ ಕಳಹಂಸೆ ಎದ್ದು ರಾಹುವ ನುಂಗಲು*
*ಮಂಡಲದ ಅಸುರರು ಮಡಿದರು.*
*ಚಂದ್ರಮನ ಬೆಳಗು ಮಂಡಲವನವಗಹಿಸಲು*
*ಮಂಡಲ ಕರಗಿ ಮಂಡಲಾಧಿಪತಿ ತನ್ನ ಕಂಡುದು ಸೋಜಿಗ.*
*ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ !*

ಶರಣನು ಶಾಂತಿ ಸ್ವರೂಪನು. ಸುಜ್ಞಾನಿಯು, ಕ್ರೀಯಾಶೀಲನು. ಸತ್ಕ್ರಿಯೆಗಳ ಆಚರಣೆಯಿಂದ ಅವಿದ್ಯೆಯೆಂಬ ಚಂದ್ರನನ್ನು ನುಂಗಿದಾಗ ದೇಹ ಸಂಬಂಧಿಯಾದ ಕರಣಗಳ ವ್ಯಾಪಾರನಷ್ಟನಾಗುತ್ತಾನೆ. ಅಂಥ ಶರಣನ ಸುಜ್ಞಾನ ಪ್ರಕಾಶವು ಸರ್ವಾಂಗವನ್ನು ಅವಗ್ರಹಿಸಿದಾಗ ದೇಹಾಭಾವಮುಕ್ತನಾಗುತ್ತಾನೆ. ಆ ದೇಹಕ್ಕೆ ಆಧಾರವಾಗಿ ಜೀವವಿದೆ. ಆ ಜೀವಭಾವವು ವಿರಹಿತನಾಗಿ ತನ್ನ ಸ್ವರೂಪವಾದ ವಸ್ತುವಿನಲ್ಲಿ ಏಕಾರ್ಥವಾಗಿ ಒಡಮೂಡಿಬರುತ್ತದೆ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಮೃತದ ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ – ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

ಅವರ ವ್ಯಕ್ತಿತ್ವದ ಬಗ್ಗೆ ಬರೆಯುವುದೆಂದರೆ ಹಿಮಾಲಯವನ್ನು ಚಿತ್ರಿಸಿದಂತೆ. ಯಾವ ಮೂಲೆಯಲ್ಲಿ ನಿಂತು ನೀವು ಹಿಮಾಲಯವನ್ನು ನೋಡಿದರೂ ಅದರ ಭವ್ಯತೆ ಹೆಚ್ಚಿದಂತೆ ಅನಿಸುವುದು. ಅಂತೆಯೇ ಶ್ರೀ ಶಿವಕುಮಾರ ಸ್ವಾಮಿಗಳವರ ವ್ಯಕ್ತಿತ್ವ

– ಡಾ. ಸ.ಜ. ನಾಗಲೋಟಿಮಠ

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಆಚಾರ ಸಂಪನ್ನ ಆಧ್ಯಾತ್ಮ ಶ್ರೀ ಮೇರು
ನುಡಿದೀಪ ನಡೆದೀಪ ಲಿಂಗವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗುರುವೆ ಕಾರುಣ್ಯವೆ ಗತಿಪಥವ ತೋರುವೆ
ಮನವ ಮಡಿ ಮಾಡಿ ಸಲಹುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತೊಳಲಿ ನೀ ಬರಲಿಲ್ಲ ಬಳಲಿ ನೀ ಬರಲಿಲ್ಲ
ಅಳಿದುಳಿದು ನಿಂದ ನಿಲವಲ್ಲ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗವ ಪೂಜಿಸಿ ಫಲವ ಬೇಡದಾದೆ
ಸಮರತಿ ಸಮಕಳೆಯ ಬೆಳಗಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನದಿಯೊಳಗೆ ನದಿ ಬೆರೆತು ನಕ್ಕು ಮುನ್ನಡೆವಂತೆ
ಜಗದೊಳಗೆ ನಡೆದಿರುವೆ ವರಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದಾಸೋಹ ಧ್ವಜವೆತ್ತಿ ನಡೆದಿರುವ ಜಂಗಮವೆ
ಸ್ಥಾವರದರಿವರಿದ ಶಿವಮಹವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಸವಣ್ಣ ಕಟ್ಟಿದ ಕಲ್ಯಾಣ ಪಟ್ಟಣವ
ನೀಕಟ್ಟಿದೆ ಅದರ ಅಭಿನವವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜ್ಞಾನಾನುಭಾವವ ಮೊಗೆ ಮೊಗೆದು ನೀಡುವ
ಸತ್ಯಸಾಗರ ಪುಣ್ಯ ಪುಂಜವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವಾಣಿ ಮುಖ ಕನ್ನಡಿಯೆ ಧರ್ಮದ ಕರಡಿಗೆಯೆ
ಭಕ್ತಿಗೆ ತವರಾದ ಶಿವಸದನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶ್ರೀಮಠದ ಪ್ರಣತಿಯಲಿ ದಾಸೋಹ ತೈಲಕೆ
ಕಾಯಕ ಶಿವಬತ್ತಿ ಮಾಡಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





# ಶಿಕ್ಷಣ : ಬಸವಣ್ಣನವರು ಮತ್ತು ಗಾಂಧಿಜೀ

– ಕೆ.ಎಸ್. ಸದಾಶಿವಯ್ಯ

ವಿಶ್ವದಲ್ಲಿ ಅತಿ ದೊಡ್ಡದಾದ ಶಿಕ್ಷಣಕ್ರಮ ಭಾರತದಲ್ಲಿ ವ್ಯವಸ್ಥೆಗೊಂಡಿದೆ. ನಮ್ಮ ಹಿಂದಿನ ಆಳರಸರಾದ ಆಂಗ್ಲರಿಂದ ಪ್ರಾರಂಭವಾದ ಈ ವಿದೇಶೀಯವಾದ ಶಿಕ್ಷಣ ಇಂದು ಹೆಮ್ಮರೋಪಮವಾಗಿ ಬೆಳೆದಿದೆ; ಮುಂದೆ ಸಮುದ್ರದೋಪಮವಾಗಿ ಬೆಳೆಯಲಿದೆ.

ನಾವು ಪರಿಮಾಣಾತ್ಮಕ ಶಿಕ್ಷಣ ಕ್ರಮದಿಂದಲೆ ತೃಪ್ತಿಪಡೆಯಬೇಕೆ ಅಥವಾ ಗುಣಾತ್ಮಕ ಶಿಕ್ಷಣದ ಬಗ್ಗೆ ಲಕ್ಷ್ಯವೀಯಬೇಕೆ ಎಂಬ ಸಮಸ್ಯೆ ಸಂಶಯಗಳು ಒಟ್ಟಿಗೆ ಉದ್ಭವಿಸುತ್ತವೆ. ಗುಣಾತ್ಮಕ ಶಿಕ್ಷಣ ಅಥವಾ ಸಾರ್ಥಕ್ಯವಾದ ಶಿಕ್ಷಣಕ್ರಮ ನಮಗೆ ಲಭ್ಯವಾಗುವುದು ಅದು ಈ ತಾಯಿನಾಡಿನಲ್ಲಿ ಆಳವಾಗಿ ಬೇರುಬಿಟ್ಟು ಮೇಲೆ ಹೊಮ್ಮಿ ದೇಶಾದ್ಯಂತ ಹರಡಿದಾಗ. ಆದರೆ ಆಂಗ್ಲರಿಂದ ಎರವಲಾಗಿ ಬಂದ ಪ್ರಸ್ತುತ ಶಿಕ್ಷಣಕ್ರಮ ಹುಚ್ಚಾಬಟ್ಟೆ ಬೆಳೆಯುತ್ತಿದೆ. ತನ್ನ ಪ್ರಭಾವಕ್ಕೆ ಒಳಗಾದ ಜನರನ್ನು ಸುಸಂಸ್ಕೃತಿಸದೆ, ಸಂಸ್ಕರಿಸದೆ, ಅವರ ಜೀವನವನ್ನು ಮಾರ್ಪಡಿಸದೆ, ಅವರಿಗುಚಿತವಾದ ಉದ್ಯೋಗವನ್ನು ಒದಗಿಸದೆ, ಅವರನ್ನು ಶ್ರಮದುಡಿಮೆಯಲ್ಲಿ ತರಬೇತಿಸದೆ, ಮೇಲಾಗಿ ಈ ಆಂಗ್ಲ ಶಿಕ್ಷಣಪದ್ಧತಿ ಜೀವನ ಭೂಮಿಕೆಯಲ್ಲಿ ಸಹಸ್ರಾರು ಹುದ್ದೆಗಳಿದ್ದರೆ ಕೇವಲ ಸರಕಾರಿ ನೌಕರಿಗೆ ಯುಕ್ತವಾದ ಶಿಕ್ಷಣವನ್ನು ಮಾತ್ರ ಒದಗಿಸುತ್ತಿದೆ. ತತ್ಫಲವಾಗಿ ನಿರುದ್ಯೋಗಿಗಳ ಸಂಖ್ಯೆ ದಿನೇ ದಿನೇ ವರ್ಧಿಸುತ್ತಿದೆ. ಈ ನಿರುದ್ಯೋಗ ಸಮಸ್ಯೆ ಉಲ್ಬಣಗೊಂಡು ತೀವ್ರತರಗೊಳ್ಳುತ್ತಿದ್ದರೂ ನಮ್ಮ ಶಿಕ್ಷಣಕ್ರಮವನ್ನು ಜೀವನೋಪಯೋಗಿಯಾಗಿ ಮಾಡುವ ಶಿಕ್ಷಣ ಮುಖಂಡ ರಾಗಲಿ ಶಿಕ್ಷಣ ತಜ್ಞರಾಗಲಿ ಇಂದು ನಮಗೆ ಕಂಡುಬರುತ್ತಿಲ್ಲ. ಇಂಗ್ಲೆಂಡ್ ಅಮೆರಿಕ ಮತ್ತು ಇನ್ನಿತರ ಸುಪ್ರತಿಷ್ಠಿತ ರಾಷ್ಟ್ರಗಳ ಶಿಕ್ಷಣ ಕ್ಷೇತ್ರದಲ್ಲಿ ಸಂಭವಿಸುತ್ತಿರುವ ಬದಲಾವಣೆಗಳನ್ನು ನಮ್ಮಲ್ಲೂ ತರುವ ದ್ವಿತೀಯ ತೃತೀಯ ದರ್ಜೆಯ ನೌಕರ ಮುಖಂಡರು ನಮ್ಮಲ್ಲಿ ಶಿಕ್ಷಣತಜ್ಞರ ಮುಖವಾಡದಲ್ಲಿ ಪ್ರಮುಖಪಾತ್ರ ವಹಿಸುತ್ತಿದ್ದಾರೆ. ಇಂತಹ ಶಿಕ್ಷಣತಜ್ಞ ವೇಷಿಗಳಿಂದ ನಮ್ಮ ಶಿಕ್ಷಣಕ್ರಮ ಹದಗೆಡುವುದಲ್ಲದೆ ಉದ್ದೇಶರಹಿತವಾಗುತ್ತದೆ. ಜೀವನವಿದೂರವಾಗುತ್ತದೆ.



ಹಾಗಾದರೆ ನಮ್ಮಲ್ಲಿಯ ಶ್ರೇಷ್ಠಮಟ್ಟದ ಶಿಕ್ಷಣ ತಜ್ಞರಿಲ್ಲವೆ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಈ ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳುವುದು ಅಷ್ಟು ಕಷ್ಟವೇನಲ್ಲ. ಎಂ.ಇಡಿ., ಪಿಎಚ್.ಡಿ., ಪದವಿಗಳನ್ನು ಪಡೆದು ಸರಕಾರದಲ್ಲಿ ಇಲ್ಲವೆ ವಿಶ್ವವಿದ್ಯಾನಿಲಯಗಳಲ್ಲಿ ಉನ್ನತ ಹುದ್ದೆಯನ್ನು ಅಲಂಕರಿಸಿ ಪುಷ್ಟವೇತನವನ್ನು ಪಡೆಯುತ್ತಿದ್ದರೆ ಮತ್ತು ಗ್ರಂಥರಚನೆಯಲ್ಲಿ ತೊಡಗಿ ಹತ್ತಾರು ಕೃತಿಗಳನ್ನು ರಚಿಸಿ ಪ್ರತಿಷ್ಠಿತ ಬಹುಮಾನಗಳನ್ನು ಪಡೆಯುವುದು, ಕೃತಿರಚನೆ ಮಾಡುವುದು ಅಗತ್ಯ. ಆದರೆ ಇಷ್ಟರಿಂದಲೇ ಯಾವನೂ ಶಿಕ್ಷಣತಜ್ಞ ಎನ್ನಿಸಿಕೊಳ್ಳಲಾರ. ಈ ಪದವಿಗೇರಲು ಸತತವಾದ ಅಧ್ಯಯನದಲ್ಲಿ ತಲ್ಲೀನವಾಗುವಿಕೆ, ಸಂಶೋಧನೆಯಲ್ಲಿ ನಿರತನಾಗುವಿಕೆ, ಹೊಸ ಹೊಸ ಆವಿಷ್ಕಾರಗಳಲ್ಲಿ ತೊಡಗುವಿಕೆ, ಪ್ರಯೋಗಗಳನ್ನು ನಡೆಸಿ ಆವಿಷ್ಕೃತ ಭಾವಗಳ ಅಪರಂಜಿತನವನ್ನು ಕಂಡುಕೊಳ್ಳುವಿಕೆ, ಶಿಕ್ಷಣ ಕುರಿತ ಚಿಂತನಮಂಥದಲ್ಲಿ ಸಮಯ ಸವೆಸುವಿಕೆ, ವಸ್ತುವಿಷಯಗಳನ್ನು ತನ್ನದೇ ಆದ ಹೊಸ ದೃಷ್ಟಿಯಿಂದ ನೋಡುವಿಕೆ ಮತ್ತು ತಾನು ಮಾಡುವ ಕೆಲಸದಲ್ಲಿ ಸೃಷ್ಟ್ಯಾತ್ಮಕತೆ ವಿಮರ್ಶನ ದೃಷ್ಟಿ, ಸ್ವಂತಿಕೆ, ವಿಚಾರಪರತೆ ಮೊದಲಾದವುಗಳು ಮೇಳವಿಸಬೇಕು. ಇವೆಲ್ಲಕ್ಕಿಂತ ಮಿಗಿಲಾಗಿ ತಾಯ್‌ನಾಡಿನ ಜೀವನ, ಸಂಸ್ಕೃತಿ, ಜನಜೀವನ, ಹವೆ, ಭೂಗುಣ, ಜನತೆಯ ಆಶೆ ಅಭೀಪ್ಸೆಗಳು, ರಾಷ್ಟ್ರಸಮಸ್ಯೆಗಳು, ಆರ್ಥಿಕಸ್ಥಿತಿ, ಸಂಪನ್ಮೂಲಗಳು, ಜನಜೀವನಮಟ್ಟ, ಜನತೆಯ ಶಿಕ್ಷಣಮಟ್ಟ, ನೈತಿಕಮಟ್ಟ, ಸರಕಾರದ ಧೋರಣೆ, ನಿಲವುಗಳು – ಇತ್ಯಾದಿಗಳು ಕರಗತವಾಗಿರಬೇಕು. ರಾಷ್ಟ್ರದ ಜನಜೀವನ ನಾಡಿಯನ್ನು ಮಿಡಿದು ನೋಡುವ ಶಕ್ತಿಯೊಂದೇ ಸಾಲದು. ರಾಷ್ಟ್ರದ ಬಗ್ಗೆ ಅಪಾರ ಪ್ರೇಮ, ಜನಗಳ ಬಗ್ಗೆ ಅನುಕಂಪ, ಅವರ ಜೀವನವನ್ನು ಎತ್ತರಿಸುವ ಕಾತರತೆ, ಜನಜೀವನ ಸಮಸ್ಯೆಗಳನ್ನು ಬಿಡಿಸುವಲ್ಲಿ ಕಳಕಳಿ ಮೊದಲಾದುವನ್ನು ಮೈಗೂಡಿಸಿಕೊಂಡು ಮಾನವ ಪ್ರೇಮಿಯಾಗಬೇಕು. ಈ ಎಲ್ಲ ಗುಣಗಳನ್ನು ಏಕೈಕ ವ್ಯಕ್ತಿಯಲ್ಲಿ ಕಾಣುವುದು ದುರ್ಲಭ. ಇವುಗಳಲ್ಲಿ ಕೆಲವನ್ನಾದರೂ ಅಳವಡಿಸಿಕೊಂಡಿರುವ ವ್ಯಕ್ತಿಗಳನ್ನೂ ಕಾಣುವುದು ಕಷ್ಟ, ಈ ಮೇಲೆ ಹೆಸರಿಸಿದ

ಗುಣಗಳಲ್ಲಿ ಬಹುತೇಕವನ್ನು ತಮ್ಮ ನಡೆನುಡಿಯಲ್ಲಿ ಪ್ರತಿಬಿಂಬಿಸಿದ ಶಿಕ್ಷಣ ತಜ್ಞರನ್ನು ಕಾಣಬೇಕಾದರೆ ಶಿಕ್ಷಣದ ಇತಿಹಾಸದ ಪುಟಗಳನ್ನು ತಿರುವಿಹಾಕಬೇಕಾಗುತ್ತದೆ. ಇವರುಗಳಲ್ಲಿ ಮುಖ್ಯರಾದವರೆಂದರೆ ಶ್ರೀ ಬಸವೇಶ್ವರರು, ಮಹಾತ್ಮಗಾಂಧೀಜಿಯವರು, ರವೀಂದ್ರನಾಥ ಠಾಕೂರರು ಮತ್ತು ಶ್ರೀ ಅರವಿಂದರು. ಇನ್ನು ಮುಂದೆ ಶ್ರೀ ಬಸವೇಶ್ವರರ ಕಾಯಕ ಶಿಕ್ಷಣ ಪದ್ಧತಿ ಮತ್ತು ಮಹಾತ್ಮಜಿಯವರ ಮೂಲಶಿಕ್ಷಣ ಪದ್ಧತಿಗಳನ್ನು ಸೂಕ್ಷ್ಮವಾಗಿ ವಿವೇಚಿಸುವ ಪ್ರಯತ್ನಮಾಡುತ್ತೇನೆ.

*ಕಾಯಕ ಶಿಕ್ಷಣ*

ಮೂಲಶಿಕ್ಷಣ ಪದ್ಧತಿಯ ಬಹುಜನರ ಪ್ರಶಂಸೆಗೆ ಪಾತ್ರವಾಗಿರುವುದಲ್ಲದೆ ಗಣನೀಯ ಶಿಕ್ಷಣತಜ್ಞರ ಗಮನವನ್ನು ಸೆಳೆದಿದೆ. ಈ ಶಿಕ್ಷಣದ ಪ್ರಚಾರಕೀರ್ತಿ ಮಹಾತ್ಮ ಗಾಂಧೀಜಿಯವರಿಗೆ ಸಲ್ಲತಕ್ಕದ್ದು. ಗಾಂಧೀಜಿಯವರು ಈ ಶಿಕ್ಷಣದ ಸೃಜನೆಗೆ ಕಾರಣರಾದರೂ ಈ ಶಿಕ್ಷಣದ ಮೂಲಕ ಭಾರತೀಯ ಸಂಸ್ಕೃತಿಯ ಪರಂಪರೆಯಲ್ಲಿ ಕಂಡುಬರುತ್ತದೆ. ಮೂಲಶಿಕ್ಷಣಕ್ಕೆ ಸಮಾನ ವಾದ ಇಲ್ಲವೆ ಅನುರೂಪವಾದ ಶಿಕ್ಷಣ ಕ್ರಮವು ಮಹಾತ್ಮ ಶ್ರೀ ಬಸವೇಶ್ವರರ ದಿವ್ಯ ನೇತೃತ್ವದಲ್ಲಿ ಶಿವಶರಣರಿಂದ ಹನ್ನೆರಡನೆಯ ಶತಮಾನದಲ್ಲಿ ಆವಿಷ್ಕಾರಗೊಂಡಿರುವುದು ಕಂಡುಬರುತ್ತದೆ. ಅಂದು ಇದು ಕಾಯಕ ಶಿಕ್ಷಣಪದ್ಧತಿಯೆಂದು ಪ್ರಸಿದ್ಧಿಗೆ ಬಂದಿತು. ಅಂದು ಕರ್ನಾಟಕದಲ್ಲಿ ನಡೆದ ಮಹಾ ಸಮಾಜ ಕ್ರಾಂತಿಯ ಒಂದು ಭಾಗವಾಗಿ ಈ ಶಿಕ್ಷಣಕ್ರಮವೂ ಚಾಲನೆಗೆ ಬಂದಿತು. ಸಮಾಜದಲ್ಲಿ ಕ್ರಾಂತಿಕಾರಕ ಬದಲಾವಣೆ ಗಳನ್ನು ತರಲು ಶಿಕ್ಷಣ ಕ್ರಮದಿಂದ ಮಾತ್ರ ಸಾಧ್ಯ. ಇದನ್ನು ಅರಿತೇ ಅಂದಿನ ಶಿವಶರಣರು ತಮ್ಮ ಕ್ರಾಂತಿಕಾರಕ ಬೋಧನೆಗಳನ್ನು ಚಿರಸ್ಥಾಯಿಗೊಳಿಸಲು ನವೋನವಶಿಕ್ಷಣಪದ್ಧತಿಯನ್ನೇ ಸೃಷ್ಟಿಸಿ ಪ್ರಚಾರಕ್ಕೆ ತಂದರು.



ಕರ್ನಾಟಕದಲ್ಲಿ ಶಿವಶರಣರು ತಮ್ಮ ಕಾರ್ಯವನ್ನು ಆರಂಭಿಸುವ ಮುನ್ನ ರಾಷ್ಟ್ರದ ಇತರ ಭಾಗಗಳಂತೆ ಇಲ್ಲಿಯೂ ಶಿಕ್ಷಣವು ಕೆಲವು ವರ್ಗದವರ ಸ್ವತ್ತಾಗಿತ್ತು, ಅಗ್ರಹಾರ ಮತ್ತು ಬ್ರಹ್ಮಪುರಿಗಳು ಅಂದಿನ ಮುಖ್ಯ ಶಿಕ್ಷಣ ಕೇಂದ್ರಗಳಾಗಿದ್ದವು. ಇವು ಅಳರಸರು ಮತ್ತು ಶ್ರೀಮಂತರಿಂದ ಬಂದ ದತ್ತಿಯಿಂದ ದಾನದಿಂದ ನಡೆಸಲ್ಪಡುತ್ತಿದ್ದವು. ಇವು ಮುಖ್ಯವಾಗಿ ಬ್ರಾಹ್ಮಣರ ವಿದ್ಯಾಕೇಂದ್ರಗಳಾಗಿದ್ದವು. ಜನ ಸಾಮಾನ್ಯರಿಗೆ ಈ ಕೇಂದ್ರಗಳಲ್ಲಿ ವಿದ್ಯೆಗೆ ಅವಕಾಶವಿರಲಿಲ್ಲ. ಈ ಕಾರಣದಿಂದ ಜನತೆ ಅನಕ್ಷರತೆಗೆ, ಮೌಢ್ಯತೆಗೆ ಈಡಾಗಿ ಶಿಕ್ಷಿತ ವರ್ಗದವರ ಶೋಷಣೆಗೆ ಗುರಿಯಾಗಿದ್ದಿತು. ಬೌದ್ಧರು ಮತ್ತು ಜೈನರು ವರ್ಣಾಶ್ರಮಧರ್ಮದ ವಿರುದ್ಧವಾಗಿ ಬಂಡೆದ್ದರೂ ಜನತೆಗೆ ಸಾರ್ವತ್ರಿಕವಾದ ಶಿಕ್ಷಣವನ್ನು ಒದಗಿಸಿ ಸ್ವತಂತ್ರಜೀವಿಗಳನ್ನಾಗಿಸಲು ಸಮರ್ಪಕ ಕ್ರಮಗಳನ್ನು ಕೈಗೊಳ್ಳಲಿಲ್ಲ. ದೇಶವು ಸಾಂಸ್ಕೃತಿಕವಾಗಿ ಕ್ಷೀಣವಾಗುತ್ತ ನಡೆಯಿತು. ಪರಿವ್ರಾಜಕರಾದ ಸಂನ್ಯಾಸಿಗಳು. ಧರ್ಮಪ್ರಚಾರರು ಸಮಾಜಕ್ಕೆ ಹೊರೆಯಾಗತೊಡಗಿದರು.

ಕರ್ನಾಟಕದಲ್ಲಿ ಶಿವಶರಣರ ಕಾಲವು ಜ್ಞಾನಪುನರುಜ್ಜೀವನದ ಮತ್ತು ವಿಚಾರವಂತರ ಯುಗವೆಂದು ಪ್ರಸಿದ್ಧವಾಗಿದೆ. ಮಹಾತ್ಮ ಶ್ರೀ ಬಸವೇಶ್ವರರು ಮಾನವ ಜನಾಂಗದಲ್ಲಿ ಅತ್ಯಂತ ಉನ್ನತ ಶ್ರೇಣಿಯ ಸಮಾಜ ಸುಧಾರಕರಾಗಿ ಜೀವನದ ಕೊಳೆ ಕಲ್ಮಶಗಳನ್ನು ತೊಳೆದು ಜನತೆಯಲ್ಲಿ ಮಾನವಿಕ ಪ್ರಜ್ಞೆಯನ್ನು ಬಡಿದೆಚ್ಚರಿಸುವ ಮಹಾಕಾರ್ಯವನ್ನು ಕೈಕೊಂಡರು. ಮಾನವನನ್ನು ಮಹಾದೇವತ್ವಕ್ಕೆ ಏರಿಸುವ ತತ್ವಬೋಧೆಯನ್ನು ಮೊದಲು ಮಾಡಿದವರೇ ಶ್ರೀ ಬಸವೇಶ್ವರರು, ಮತ್ತು ದೈಹಿಕಶ್ರಮ ಗೌರವದ ಮಹತ್ವವನ್ನು ಎತ್ತಿ ಹಿಡಿದ ಕೀರ್ತಿ ಶ್ರೀ ಬಸವೇಶ್ವರರಿಗೇ ಸಲ್ಲಬೇಕು. ಸ್ತ್ರೀಪುರುಷ ರಲ್ಲಿರುವ ಭೇದಭಾವವನ್ನು ತೊಡೆದುಹಾಕಿ ಸಮಾನತೆಯನ್ನು ಸ್ಥಾಪಿಸಿದರು. ಶತಶತ ಮಾನಗಳ ದಾಸ್ಯದಿಂದ ಜನಸಾಮಾನ್ಯರನ್ನು ವಿಮುಕ್ತಗೊಳಿಸಲು ಸತತವಾಗಿ ಹೋರಾಡಿದರು. ಬಸವೇಶ್ವರರು ಕೇವಲ ಧಾರ್ಮಿಕ ಅಥವಾ ಸಾಮಾಜಿಕ ಸುಧಾರಕರು ಮಾತ್ರವಲ್ಲ, ಪ್ಲೇಟೊ, ಅರಿಸ್ಟಾಟಲರಂತೆ ಶ್ರೇಷ್ಠ ಮಟ್ಟದ ಶಿಕ್ಷಣ ತಜ್ಞರು ಹೌದು. ಕಾಯಕ ತತ್ವವನ್ನ ಅದರ ಮಹತ್ವವನ್ನು ಸೃಷ್ಟಿಸಿದ, ಪ್ರಚಾರಿಸಿದ ಹಿರಿಮೆ ಈ ಭಕ್ತಿಭಂಡಾರಿಗೆ ಸಲ್ಲಬೇಕು. ಅವರು ಹೊಸದಾಗಿ ಕಟ್ಟಿದ ಹೊಸ ಸಮಾಜದ ಮೂಲತತ್ವವಾಗಿ ಪರಿಣಮಿಸಿತು. ಈ ಕಾಯಕ ತತ್ವ ಕಾಯಕ ಶಿಕ್ಷಣದ ವಿಶೇಷಾರ್ಥವೆಂದರೆ "ಕಾಯಕವೇ ಕೈಲಾಸ." ಇದನ್ನು ಕೇವಲ ತತ್ವವೆಂದು ಮಾತ್ರ ಪರಿಗಣಿಸದೆ ಆಚರಣೆಯಲ್ಲಿಯೂ ತರಲಾಯಿತು. ಕಲ್ಯಾಣವು ಕಾಯಕಶಿಕ್ಷಣದ ಮೂಲಕೇಂದ್ರವಾಯಿತು ಎಂಬುದನ್ನು ತಿಳಿಯುವುದೇ ಕುತೂಹಲಕಾರಿಯಾಗಿದೆ.

ಶಿವಶರಣರು ಕಲ್ಯಾಣವನ್ನು ತಮ್ಮ ಕಾರ್ಯಾಚರಣೆಯ ಕೇಂದ್ರವಾಗಿ ಚುನಾಯಿಸಿದರು. ಇವರು ಒಂದು ವಿದ್ಯಾಸಂಸ್ಥೆಯನ್ನು ಬಸವಣ್ಣನವರ ಮಾರ್ಗದರ್ಶನದಲ್ಲಿ ಸ್ಥಾಪಿಸಿದರು. ಇದೇ ಕೊನೆಗೆ "ಅನುಭವ ಮಂಟಪ"ವೆಂದು ಪ್ರಸಿದ್ಧವಾಯಿತು. ಅನುಭವಮಂಟಪ





ವೆಂದರೆ ಪ್ರಾರ್ಥನಾ ಮಂದಿರವಲ್ಲ; ಇಲ್ಲವೆ ಜಂಗಮರು ಸೇರಿ ನಡೆಸುವ ಧರ್ಮಜಿಜ್ಞಾಸೆಯ ವೇದಿಕೆಯಲ್ಲ. ಆದರೆ ಇದು ಅನುಭವಜನ್ಯ ಜ್ಞಾನದ ಕೇಂದ್ರ. ಶಿವಶರಣರು ತಮ್ಮ ಉದಾತ್ತ ಅನುಭವದಿಂದಲೂ ಜೀವನ ಮೂಲವಾದ ಜ್ಞಾನದಿಂದಲೂ ಅನುಭವಮಂಟಪದ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರು. ಶಿವಶರಣರ ಮುಖ್ಯೋದ್ದೇಶ, ಸತ್ಯದ ಸಂಶೋಧನೆಯಾಗಿತ್ತು, ಮತ್ತು ಇದರಿಂದ ಜನಜೀವನವನ್ನು ಪರಿಶುದ್ಧಗೊಳಿಸುವುದಾಗಿತ್ತು. ಕಾಯಕ ಶಬ್ದವು ಅಲ್ಲಿ ನೆರೆದ ಶರಣರ ಮಂತ್ರವಾಗಿ ಪರಿಣಮಿಸಿತು. ಇದು ಜನತೆಗೆ ನಾಲ್ಕು ಮುಖ್ಯ ತತ್ವಗಳನ್ನು ಬೋಧಿಸಿತು :

೧. ಕಾಯಕದ ಮೂಲಕ ದೈವತ್ವಕ್ಕೆ ಏರುವುದು.

೨. ದಾಸೋಹ, ದೈಹಿಕ ಮತ್ತು ಮಾನಸಿಕವಾಗಿ ಜನತಾಸೇವೆ ಮಾಡುವುದು.

೩. ಅರ್ಪಣ, ಸರ್ವಸ್ವವನ್ನೂ ತ್ಯಾಗಮಾಡುವುದು.

೪. ಅನುಭವ, ಆತ್ಮಾನುಭವವನ್ನು ಹೊಂದುವುದು.

ಕಾಯಕವನ್ನು ಸಾಧಿಸಲು ಅಥವಾ ಅಭ್ಯಸಿಸಲು ಸಾಧ್ಯವಾಗುವುದು ಮನಃಪೂರ್ವಕವಾಗಿ ದುಡಿಯಲು ಪ್ರಾರಂಭಿಸಿದಾಗ, ಮಾಡುವ ಕೆಲಸದಲ್ಲಿ ಪೂರ್ಣತೃಪ್ತಿಯನ್ನು ಪಡೆಯಲು ಪ್ರಯತ್ನಿಸಿದಾಗ, ಮಾಡುವ ಕಾಯಕದಲ್ಲಿ ತಾದಾತ್ಮ್ಯ ಹೊಂದಿದಾಗ ಕಾಯಕದ ಪ್ರಜ್ಞೆ ಮೂಡುತ್ತದೆ; ಆತ್ಮಾನುಭವದಲ್ಲಿ ಪರ್ಯವಸಾನವಾಗುತ್ತದೆ. ಇದು ಮಹೋದಾತ್ತವೂ ಗೌರವಾನ್ವಿತವೂ ಆದ ವ್ಯಾಪಕಾರ್ಥವನ್ನು ಹೊಂದಿದೆ. ಕಾಯಕವು ಕೇವಲ ಭೌತಿಕವಾದ ಸೌಲಭ್ಯಗಳನ್ನು ಒದಗಿಸುವುದಲ್ಲದೆ ಆಧ್ಯಾತ್ಮಿಕವಾದ ಆನಂದದ ಔನ್ನತ್ಯಕ್ಕೂ ಕೊಂಡೊಯ್ಯುತ್ತದೆ. ಕಾಯಕ ಶಿಕ್ಷಣವು ಶ್ರಮವಿಭಜನೆಗೆ ಮಹತ್ವ ಕೊಡುತ್ತದೆ. ಶಿರ, ಹೃದಯ ಮತ್ತು ಕೈಗಳ ಪರಸ್ಪರ ಪೂರ್ಣ ಸಹಕಾರ ಭಾವದಿಂದ ಅಂದರೆ ತ್ರಿಕರ್ಣಪೂರ್ವಕವಾಗಿ ಕಾಯಕದಲ್ಲಿ ನಿರತವಾದಾಗ, ಇಂತಹ ಕಾಯಕಜೀವನ ಪರಿಶುದ್ಧತೆಗೆ ಮಾರ್ಗ ಕಲ್ಪಿಸುತ್ತದೆ. ಕಾಯಕದ ಪ್ರಪಂಚದಲ್ಲಿ, ಭಿಕ್ಷೆಗೆ ತಾವಿಲ್ಲ ಇದು ಅನುಭವ, ಗುಣಧರ್ಮ, ಸೌಶೀಲ್ಯ ಮತ್ತು ಶಿಸ್ತು ನಿಯಮಗಳಿಗೆ ಆದ್ಯತೆ ಕೊಡುತ್ತದೆ.

ಹೊಟ್ಟೆಗಿಲ್ಲದ ಭಿಕ್ಷಾಟನೆಗೆ ಮತ್ತು ಶಿಕ್ಷಿತ ವರ್ಗದವರ ಶೋಷಣೆಗೆ ಸಿಲುಕಿ ಸಮಾಜವು ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಅಧೋಗತಿಗಿಳಿದ ಸಮಯದಲ್ಲಿ ಶಿವಶರಣರು ಕಾಯಕ ಶಿಕ್ಷಣವನ್ನು ವ್ಯವಸ್ಥೆಗೊಳಿಸಿ ಜನತೆಯನ್ನು ವಿಮೋಚನೆಗೊಳಿಸುವ ಕಾರ್ಯದಲ್ಲಿ ನಿರತರಾದರು. ಶಿವಶರಣನು ಕೇವಲ ಧರ್ಮಬೋಧಕರಲ್ಲ. ಅವನು ಮುಖ್ಯವಾಗಿ ಚಿಂತಕ, ಕಾಯಕದಿಂದ ಪ್ರಪಂಚದ ಅನುಭವವನ್ನು ಹೊಂದಿದವನು. ಇವನು ಸನ್ಮಾರ್ಗಿ, ಅಹಿಂಸಾವ್ರತಿ, ನ್ಯಾಯಕ್ಕಾಗಿ ತನ್ನ ಜೀವನವನ್ನೇ ತ್ಯಾಗಿಸಬಲ್ಲ ಶ್ರೀವ್ಯಕ್ತಿ. ಸತ್ಯ ಅಹಿಂಸೆ ಮತ್ತು ನ್ಯಾಯಮಾರ್ಗಗಳನ್ನು ಸರ್ವರೂ ಅನುಸರಣೆ ಮಾಡಬೇಕೆಂಬುದೇ ಶರಣನ ಅಭಿಮತ. ಕಾಯಕಶಿಕ್ಷಣ ಚಳುವಳಿಯನ್ನು ಕರ್ನಾಟಕ ದಾದ್ಯಂತ ಪ್ರಚಾರಗೈದ ಸಾಹಸಿಗಳೇ ಈ ಶಿವಶರಣರು. ಇವರು ಆಲೋಚಕರು ಹಾಗೂ ಆಚಾರಕರು. ಇವರು ತಮ್ಮ ತತ್ವಗಳನ್ನು ಆಚರಣೆಗೆ ತರಲು ಸರ್ವದಾ ಪ್ರಯತ್ನಿಸುತ್ತಿದ್ದರು. ಅಂತೆಯೇ ತಮ್ಮ ಆಚರಣಾಜನ್ಯವಾದ ತತ್ವಗಳನ್ನು ನಿರೂಪಿಸುವುದನ್ನು ಮರೆಯುತ್ತಿರಲಿಲ್ಲ. ಕಾಯಕಶಿಕ್ಷಣವು ಶರಣರನ್ನು ಸೃಜನಾತ್ಮಕ ವ್ಯಕ್ತಿಗಳನ್ನಾಗಿ ಪರಿವರ್ತಿಸುತ್ತಿತ್ತು. ಅವರ ಅನುಭವಗಳು ವಚನರೂಪವನ್ನು ತಳೆದು, ಸಾರ್ವಕಾಲಿಕವಾಗಿವೆ, ಜೀವನಕ್ಕೆ ದಾರಿದೀಪವಾಗಿವೆ.

ಕಾಯಕ ಶಿಕ್ಷಣದಲ್ಲಿ ಅನುಸರಿಸಲಾಗುತ್ತಿದ್ದ ಬೋಧನವನ್ನು ಅನುಭವ ಪದ್ಧತಿ ಎಂದು ಕರೆಯಲಾಗಿದೆ. ಈ ಪದ್ಧತಿಯಲ್ಲಿ ಮಾಡುವಿಕೆಯ ಮೂಲಕ ಕಲಿಯಬೇಕಾಗಿತ್ತು, ತತ್ವವಿಚಾರ, ಧಾರ್ಮಿಕ ಮತ್ತು ನೈತಿಕ ವಿಷಯಗಳನ್ನು ಕಾಯಕದ ಮೂಲಕವೇ ಒದಗಿಸಲಾಗುತ್ತಿತ್ತು. ಮಂತ್ರಮುಗ್ಧರಂತೆ ನಿಶ್ಚೇಷ್ಟಿತರಾಗಿ ಕಲಿಯುವ ವಿಷಯಗಳೇ ಇರುತ್ತಿರಲಿಲ್ಲ, ಇಲ್ಲಿ ಎಲ್ಲವೂ ಕ್ರಿಯಾತ್ಮಕವಾಗಿ ತಾನೇತಾನಾಗಿ ಸಾಗುತ್ತಿದ್ದವು. ಈ ಅನುಭವ ಶಿಕ್ಷಣದ ಪದ್ಧತಿಯಲ್ಲಿ ಕುಲಗೋತ್ರಗಳ ತರತಮಗಳ ಭೇದಭಾವನೆಗೆಳೇ ಗಣನೆಗೆ ಬರದೆ ಅದೃಶ್ಯವಾಗುತ್ತಿದ್ದವು. ಶಿಕ್ಷಣದಲ್ಲಿ ಸಮಾನ ಅವಕಾಶಗಳನ್ನು ಎಲ್ಲರಿಗೂ ಕಲ್ಪಿಸಲಾಗುತ್ತಿತ್ತು, ದೈಹಿಕ ಮತ್ತು ಮಾನಸಿಕ ಶ್ರಮಗಳು ಸರಿಸಮಾನ ಸ್ಥಾನಗಳನ್ನು ಪಡೆದಿದ್ದವು. ವ್ಯಕ್ತಿಯು ತನಗೆ ಅವಶ್ಯವಾದುದಕ್ಕಿಂತ ಮಿಗಿಲಾಗಿ ಸಂಪಾದಿಸಿದ್ದರೆ ಅದನ್ನು ದಾಸೋಹಕ್ಕೆ ಕೊಡುತ್ತಿದ್ದರು.

*ಕಾಯಕ ಶಿಕ್ಷಣ ಚಳುವಳಿಯ ಗುರಿಗಳು*

೧. ಅನಕ್ಷರತೆಯನ್ನು ನಿರ್ಮೂಲಮಾಡಿ ಜ್ಞಾನಪ್ರಸರಣ ಮಾಡುವುದು.

೨. ಆರ್ಥಿಕವಾದ ಸಮಾನತೆಯನ್ನು ಸಾಧಿಸುವುದು.

೩. ಸಮಾಜದಲ್ಲಿ ಪ್ರತಿಯೊರ್ವನಿಗೂ ತನ್ನ ವ್ಯಕ್ತಿತ್ವವನ್ನು, ವೈಯಕ್ತಿಕತೆಯನ್ನು ಬೆಳೆಸಿಕೊಳ್ಳಲು ಸಮಾನ ಅವಕಾಶ ಕಲ್ಪಿಸುವುದು.

೪. ಸಾಮಾಜಿಕವಾದ ಸಮಾನತೆಯನ್ನೂ ಸಹೋದರ ಭಾವವನ್ನು ವರ್ಧಿಸಿ, ಜನತೆ ಕೈಗೊಳ್ಳುವ ಉದ್ಯೋಗದಿಂದ ಸಂಭವಿಸುವ ಅಸಮಾನತೆಗಳನ್ನು ಹೋಗಲಾಡಿಸುವುದು.

೫. ಭಿಕ್ಷಾಟನೆಯನ್ನು ನಿರ್ಮೂಲನ ಮಾಡಿ, ಎಲ್ಲರನ್ನೂ ಸ್ವಾವಲಂಬಿಗಳನ್ನಾಗಿ ಮಾಡುವುದು.

ಈ ತತ್ವಗಳು ಆಕರ್ಷಕವೂ ಕ್ರಿಯಾತ್ಮಕವೂ ಆದ ಪ್ರಯುಕ್ತ ಜನತೆಯು ಕಾಯಕ ಶಿಕ್ಷಣವನ್ನು ಸ್ವಾಗತಿಸಿದರು. ಭಾರತಾದ್ಯಂತ ಜನರು ಕಲ್ಯಾಣದತ್ತ ಧಾವಿಸಿದರು; ಅನುಭವ ಮಂಟಪಶಾಲೆಯಲ್ಲಿ ಪೀಯೂಷ ಪಾನದಿಂದ ಪಾವನತೆಯನ್ನು ಪಡೆಯಲು. ಈ ಶಾಲೆಯ ಶಿಕ್ಷಣ ಮಾಧ್ಯಮವು ಕನ್ನಡ. ಹೊರಗಿನಿಂದ ಕಲ್ಯಾಣಕ್ಕೆ ಬಂದವರು ಮೊದಲು

ಕನ್ನಡ ಕಲಿಯಬೇಕಾಯಿತು. ಅನುಭವಮಂಟಪದಲ್ಲಿ ಸಕ್ರಿಯವಾಗಿ ಭಾಗವಹಿಸಿದವರೆಲ್ಲ ಚಿಂತಕರಾದರು. ವಿಚಾರಶೀಲರಾದರು. ಕಟುವಿಮರ್ಶಕರಾದರು. ಅವರ ಉದಾತ್ತ ವಿಚಾರಧಾರೆಗಳು, ಅನುಭವಪೂರ್ಣ ಹೇಳಿಕೆಗಳು ತಿಳಿವಳಿಕೆಗಳು ವಚನ ಮತ್ತು ಕಾವ್ಯ ರೂಪಗಳನ್ನು ಧಾರಣೆ ಮಾಡಿವೆ. ಮೋಳಿಗೆ ಮಾರಯ್ಯ, ರಾಣಿ ಮಹಾದೇವಿ ಮತ್ತು ಸೌರಾಷ್ಟ್ರದ ಆದಯ್ಯ ಇವರುಗಳು ಕಾಯಕ ಶಿಕ್ಷಣದ ಮೂಸೆಯಿಂದ ಅಪರಂಜಿಯಾಗಿ ಹೊರಬಿದ್ದ ಅನರ್ಘ್ಯ ಜ್ಞಾನರತ್ನಗಳು.

ಶಿವಶರಣರ ಕಾಲದಲ್ಲಿ ಶಿಕ್ಷಣವು ಉಚಿತವೂ ಸಾರ್ವತ್ರಿಕವೂ ಆಗಿದ್ದಿತು. ಅನುಭವಮಂಟಪದಲ್ಲಿ ತರಬೇತಿಯನ್ನು ಪಡೆದ ಅನುಭಾವಿಗಳು, ಶಿಕ್ಷಣವು ಪ್ರತಿಯೊಬ್ಬ ಮಾನವನ ಆ ಜನ್ಮ ಹಕ್ಕು ಎಂಬ ಸಂದೇಶವನ್ನು ಮನೆ ಮನೆಗೂ ಕೊಂಡೊಯ್ದರು. ಹೀಗೆ ಉಚಿತವಾಗಿ ಒದಗಿಸಲಾಗುತ್ತಿದ್ದ ಶಿಕ್ಷಣಕ್ಕೆ ಬಸವೇಶ್ವರರ ಅನುಯಾಯಿಗಳು ಒಂದು ರೂಪ ಕೊಟ್ಟು ವ್ಯವಸ್ಥಿತವಾಗಿ ಕಾಯಕ ಶಿಕ್ಷಣದ ಪ್ರಚಾರದಲ್ಲಿ ತೊಡಗಿದರು. ಈ ಶಿಕ್ಷಣ ಮಹಾಜಂಗಮರ ಆಶೀರ್ವಾದ ಫಲವಾಗಿಯೇ ಬೆಳೆಯತೊಡಗಿತು. ಜಂಗಮರು ಗ್ರಾಮೀಣ ಪ್ರದೇಶದಲ್ಲಿ ಸ್ಥಾಪಿತವಾದ ಮಠಗಳ, ಶಾಖಾ ಮಠಗಳ ಸಹಾಯದಿಂದ ತಮ್ಮ ಶಿಕ್ಷಣ ಪ್ರಚಾರ ಕಾರ್ಯವನ್ನು ನಡೆಸುತ್ತಿದ್ದರು. ಕೆಲವು ಮಠಗಳು ತಾವು ಕೈಕೊಂಡಿದ್ದ ಕಾಯಕದಿಂದಲೇ ಸ್ವಾವಲಂಬಿಯಾಗಿದ್ದವು. ಕೆಲವಕ್ಕೆ ಉದಾರಸ್ವಭಾವದ ಶ್ರೀಮಂತರು ಶಿಕ್ಷಣ ಪ್ರಚಾರಕ್ಕಾಗಿ ಹಣದ, ಧಾನ್ಯದ ಮತ್ತು ಭೂಮಿಯ ಮೂಲಕ ಸಹಾಯ ಮಾಡುತ್ತಿದ್ದರು.

### *ಕಾಯಕ ಶಿಕ್ಷಣ ವ್ಯವಸ್ಥೆಯ ಮುಖ್ಯ ತತ್ವಗಳು*

೧. ಅಕ್ಷರಮಾಲೆಯ ಅಭ್ಯಾಸ.

೨. ಈ ಜ್ಞಾನವನ್ನು ಒದಗಿಸಲು ಶಿವಶರಣರ ಮಠಗಳನ್ನು ಶಿಕ್ಷಣ ಕೇಂದ್ರಗಳನ್ನಾಗಿ ಮಾಡುವುದು.

೩. ಕನ್ನಡವೇ ಶಿಕ್ಷಣದ ಮಾಧ್ಯಮ (ಶಿವಶರಣರ ಬಹುತೇಕ ಸಾಹಿತ್ಯವೆಲ್ಲವೂ ಕನ್ನಡದಲ್ಲಿಯೇ ಸೃಷ್ಟಿಯಾಗಿದೆ.)

೪. ವೃತ್ತಿಯ ಮೂಲಕವೇ ಜ್ಞಾನವನ್ನು ಒದಗಿಸುವ ಶಿಕ್ಷಣತತ್ವವನ್ನು ಅನುಸರಿಸುವುದು.

೫. ಶಿಕ್ಷಣದಲ್ಲಿ ಲಿಂಗಭೇದವನ್ನು ತೊಡೆದುಹಾಕಿ ಸ್ತ್ರೀ ಪುರುಷರಿಗೆ ಸಮಾನವಾಗಿಯೇ ಶಿಕ್ಷಣವನ್ನು ಒದಗಿಸುವುದು. (ಅನುಭವಮಂಟಪದಲ್ಲಿ ಪ್ರಖ್ಯಾತ ಸ್ತ್ರೀ ವ್ಯಕ್ತಿಗಳಾದ ಅಕ್ಕಮಹಾದೇವಿ, ನೀಲಾಂಬಿಕೆ, ರಾಣಿ ಮಹಾದೇವಿ, ಮುಕ್ತಾಯಕ್ಕ, ಲಿಂಗಮ್ಮ – ಇವರು ಭಾಗವಹಿಸುತ್ತಿದ್ದರು.)

೬. ಅಷ್ಟಾವರಣಗಳು, ಪಂಚಾಚಾರಗಳು, ಷಟ್ಸ್ಥಲಗಳು – ಮೊದಲಾದ ತತ್ವಗಳನ್ನು ಕಾಯಕದ ಮೂಲಕವೇ ಬೋಧಿಸುವುದು.

೭. ಈ ಶಿಕ್ಷಣವನ್ನು ಉತ್ಪಾದಕಾರಕವನ್ನಾಗಿ ಮಾಡುವುದು.

೮. ಈ ಶಿಕ್ಷಣದ ಮುಖ್ಯ ಕಾಯಕಗಳು : ನೂಲುವುದು, ನೇಯುವುದು, ವ್ಯವಸಾಯ, ಮರಗೆಲಸ, ಕಮ್ಮಾರಿಕೆ, ಕಾಗದ ತಯಾರಿಕೆ, ಚಾಪೆ, ಬುಟ್ಟಿ ಮಾಡುವುದು, ಕಸೂತಿ, ಹೊಲಿಗೆ, ಚರ್ಮ ಹದ ಮಾಡುವುದು, ಪಾದರಕ್ಷೆಗಳನ್ನು ಮಾಡುವುದು ಇತ್ಯಾದಿ... ಇತ್ಯಾದಿ.

ಕಾಯಕ ಶಿಕ್ಷಣದ ಪರಿಣಾಮವಾಗಿ ಜನರು ಸುಶಿಕ್ಷಿತರಾದರು. ಸ್ತ್ರೀಯರು ಸ್ವಾತಂತ್ರ್ಯ ಪಡೆದು ಪುರುಷರಿಗೆ ಸಮಾನವಾದ ಸ್ಥಾನಮಾನ ಗಳಿಸಿದರು. ವೃತ್ತಿಯ ಮೂಲಕ ಶಿಕ್ಷಣ ಪಡೆದು ಅದನ್ನು ಜೀವನದೊಡನೆ ಸಹಸಂಬಂಧವನ್ನು ಕಲ್ಪಿಸುವಲ್ಲಿ ಯಶಸ್ಸುಗಳಿಸಿದರು. ಸಮಾಜ ಸ್ವಾವಲಂಬಿಯಾಯಿತು. ಶೈಕ್ಷಣಿಕವಾಗಿಯೂ ಸಾಂಸ್ಕೃತಿಕವಾಗಿಯೂ ದೇಶ ಮಹತ್ತರವಾದ ಪ್ರಗತಿಯನ್ನು ಸಾಧಿಸಿತು. ಭಿಕ್ಷಾಟನೆ ಹೇಳಹೆಸರಿಲ್ಲದಾಯಿತು. ಪ್ರತಿಯೊಬ್ಬ ವ್ಯಕ್ತಿಯೂ ಕಾಯಕದಲ್ಲಿ ನಿಷ್ಠೆ ಹೊಂದಿ ಅದರ ಮೌಲ್ಯದ ಮತ್ತು ಅಗತ್ಯತೆಯ ಬಗೆಗೆ ಆಸ್ಥೆ ವಹಿಸಿ ತೊಡಗಿದನು. ಇಹದಲ್ಲಿ ಜೀವನಯಾಪನೆಗೆ ಅದನ್ನು ಅವಲಂಬಿಸಿ ಪರದಲ್ಲಿ ಮೋಕ್ಷಸಾಧನೆಗೆ ಆಶ್ರಯಿಸಿದರು. ಕಾಯಕ ಶಿಕ್ಷಣ ಪದ್ಧತಿಯು ಮಹಿಮಾನ್ವಿತ ಶರಣರನ್ನು ಸೃಷ್ಟಿಸಿ ಸಮಾಜದ ಪುರೋಭಿವೃದ್ಧಿಗೆ ಕಾರಣವಾಯಿತು. ಸ್ವತಂತ್ರವಾದ ಆಲೋಚನೆಯ ಮಹತ್ತು ಜನತೆಯಲ್ಲಿ ಬೆಳೆಯತೊಡಗಿತು. ಮಾನವಸೇವೆ ಮತ್ತು ಸೋದರಭಾವಗಳು ಜನಜೀವನದ ಅವಿಚ್ಛಿನ್ನಭಾಗಗಳಾದವು. ಪೌರಪ್ರಜ್ಞೆ ಜನತೆಯಲ್ಲಿ ಉದ್ದೀಪಿತವಾಯಿತು. ಆಚಾರಸಂಹಿತೆ ರೂಪುಗೊಂಡು ಅನುಸರಿಸಲ್ಪಟ್ಟಿತು.

### *ಶಿಕ್ಷಣ ಕೇಂದ್ರಗಳು*

ಕರ್ನಾಟಕದಲ್ಲಿ ವೀರಶೈವ ಮಠಗಳು ಕಾಯಕಶಿಕ್ಷಣದ ಕೇಂದ್ರಗಳಾದವು. ಬೃಹತ್ ಮಠಗಳು ತಯಾರಿಸಿದ ಪಠ್ಯವಿಷಯಕ್ಕೆ ಅನುಗುಣವಾದ ಶೈಕ್ಷಣಿಕ ಚಟುವಟಿಕೆಗಳು ಶಾಖಾಮಠಗಳಲ್ಲಿ, ಚಿಕ್ಕ ಶಾಲೆಗಳಲ್ಲಿ ಅನುಷ್ಠಾನಕ್ಕೆ ತರಲ್ಪಟ್ಟವು. ಈ ಮಠಗಳಲ್ಲಿ ಮುಖ್ಯವಾದವುಗಳೆಂದರೆ: ವಿರಕ್ತಮಠಗಳು, ಓದಿಸುವ ಮಠಗಳು, ಸಾಲಿಮಠಗಳು ಇತ್ಯಾದಿ. ವಿರಕ್ತ ಮಠಗಳು ಅನುಭವಮಂಟಪ ಗಳಂತೆಯೇ ಕಾರ್ಯಚಟುವಟಿಕೆಗಳನ್ನು ಕೈಗೊಳ್ಳುತ್ತಿದ್ದವು. ಧಾರ್ಮಿಕ ಸಮ್ಮೇಳನಗಳನ್ನು ವಿಚಾರಗೋಷ್ಠಿಗಳನ್ನು ಮತ್ತು ಉಪನ್ಯಾಸ ಶಿಬಿರಗಳನ್ನು ಈ ವಿರಕ್ತ ಮಠಗಳು ನಡೆಸುತ್ತಿದ್ದವು. ವಿದ್ಯಾರ್ಥಿಗಳು ಸಾಲಿ ಮಠಗಳಲ್ಲಿ ಶಿಕ್ಷಣ ಪಡೆದ ನಂತರ ಉಚ್ಚಶಿಕ್ಷಣಕ್ಕಾಗಿ ವಿರಕ್ತ ಮಠಗಳಿಗೆ ಬರುತ್ತಿದ್ದರು.

ಅನೇಕ ಹಳ್ಳಿಗಳಲ್ಲಿ ಈಗಲೂ ಓದಿಸುವ ಮಠಗಳು ಉದಾಸಿ ಮಠಗಳೆಂದು ಕರೆಯಲ್ಪಡುತ್ತಿವೆ. ಅನೇಕ ಹಿರೇಮಠಗಳು ಓದಿಸುವ ಮಠಗಳ ಚಟುವಟಿಕೆಗಳನ್ನು ಕೈಗೊಳ್ಳುತ್ತಿದ್ದವು. ಓದಿಸುವ ಮಠಗಳಲ್ಲಿ ಹೆಸರಿಗೆ ತಕ್ಕಂತೆ ವೃತ್ತಿ ಶಿಕ್ಷಣಕ್ಕೆ ಅವಕಾಶವಿಲ್ಲದೆ ಬರಿ ಓದುಬರಹಗಳನ್ನು ಮಾತ್ರ ಹೇಳಿಕೊಡಲಾಗುತ್ತಿತ್ತು. ಬಹುತೇಕ ವಿದ್ಯಾರ್ಥಿಗಳು ಸಾಲಿ ಮಠಗಳಲ್ಲಿ (ವೃತ್ತಿಶಾಲೆಗಳು) ಶಿಕ್ಷಣ ಪಡೆದ ನಂತರ ಸಾಹಿತ್ಯ ಮತ್ತು ಇತರ ವಿಷಯಗಳ ಅಧ್ಯಯನಕ್ಕೆ ಓದಿಸುವ ಮಠಗಳಿಗೆ ಬರುತ್ತಿದ್ದರು. ಸಂಸ್ಕೃತಭಾಷೆಗೆ ಈ ಮಠಗಳಲ್ಲಿ ಮುಖ್ಯ ಸ್ಥಾನವನ್ನು ಕಲ್ಪಿಸಲಾಗಿತ್ತು.



ತೌಲನಿಕ

ಕ್ರಮೇಣ ಈ ಮಠಗಳು ವೀರಶೈವ ಸಂಸ್ಕೃತ ಪಾಠಶಾಲೆಗಳಾಗಿ ಹತ್ತೊಂಭತ್ತನೆಯ ಶತಮಾನದ ಅಂತ್ಯ ಭಾಗದಲ್ಲಿ ಮತ್ತು ಇಪ್ಪತ್ತನೆಯ ಶತಮಾನದ ಪ್ರಥಮ ಭಾಗದಲ್ಲಿ ಪರಿವರ್ತಿತವಾದವು. ಇಂತಹ ಪಾಠಶಾಲೆಗಳು ಹುಬ್ಬಳ್ಳಿ, ಜಮಖಂಡಿ, ಅಬ್ಬಿಗೆರೆ ಮುತ್ತಿತರ ಪ್ರದೇಶಗಳಲ್ಲಿ ಕಾಣಬರುತ್ತವೆ. ಟೀಕೆಯ ಮಠಗಳು, ಟಿಪ್ಪಣಿ ಮಠಗಳು, ಶಬ್ದ ಮಣಿದರ್ಪಣ ಮಠಗಳು ಮತ್ತು ಇತರ ನೂರಾರು ಮಠಗಳು ಭಾಷೆ, ಸಾಹಿತ್ಯ ಮತ್ತು ವಿಮರ್ಶೆಗಳಲ್ಲಿ ಶಿಕ್ಷಣವನ್ನು ಒದಗಿಸುವಲ್ಲಿ ನಿರತವಾಗಿದ್ದವು.

### *ಸಾಲಿಮಠಗಳು*

ಸಾಲಿಮಠಗಳು ಆಧುನಿಕ ಮೂಲಶಿಕ್ಷಣ ಶಾಲೆಗಳನ್ನು ಹೋಲುತ್ತವೆ. ಈ ಮಠಗಳಲ್ಲಿ ಬೋಧನಕ್ರಮ ಅನುಭವ ಪದ್ಧತಿಯ ಮೂಲಕ ನಡೆಯುತ್ತಿತ್ತು. ಓದುವ, ಬರೆಯವ, ಲೆಕ್ಕವಿಡುವ ಕ್ರಮಗಳೊಡನೆ ವೃತ್ತಿ ಶಿಕ್ಷಣವನ್ನು ಕಡ್ಡಾಯವಾಗಿ ಹೇಳಿಕೊಡಲಾಗುತ್ತಿತ್ತು. ಕಾಗದ ಮತ್ತು ರಟ್ಟು ಮಾಡುವುದನ್ನೂ ಹೇಳಿಕೊಡಲಾಗುತ್ತಿತ್ತು. ಇಂದೂ ಸಹ ಈ ವಸ್ತುಗಳನ್ನು ಮಾಡಲು ಬಳಸುತ್ತಿದ್ದ ಉಪಕರಣಗಳು ಕಂಡುಬರುತ್ತವೆ. ಪುಸ್ತಕ ಗಾತ್ರದ ಸುರುಳಿ ಸುತ್ತಲಾಗುವ ರಟ್ಟುಗಳನ್ನು ಮಾಡಲಾಗುತ್ತಿತ್ತು. ಇವನ್ನು ಕಡತಗಳೆಂದು ಕರೆಯಲಾಗುತ್ತಿತ್ತು. ಈ ಕಡತಗಳನ್ನು ಕೈಯಿಂದ ಮಾಡಿದ ಬಟ್ಟೆಯಿಂದ ಸಿದ್ಧಗೊಳಿಸಿ ಗಂಜಿಯಿಂದ (ಅಕ್ಕಿ) ನುಣ್ಣಗೆ ಮಾಲಿಷ್ ಮಾಡಿ ಬರೆಯಲು ಯೋಗ್ಯವಾಗುವಂತೆ ಮಾಡಲಾಗುತ್ತಿತ್ತು. ಇಂತಹ ಕಡತಗಳು ಈಗಲೂ ದೊಡ್ಡ ಮಠಗಳಲ್ಲಿ ಕಂಡುಬರುತ್ತವೆ. ಈ ಕಡತಗಳು ಅಮೂಲ್ಯವಾದ ವಿಷಯಗಳಿಂದ ಕೂಡಿರುತ್ತದೆ. ಕೆಲವು ಕಡತಗಳು ವಚನಗಳನ್ನು, ಪದ್ಯಗಳನ್ನು ಪ್ರಾರ್ಥನಾ ಗೀತೆಗಳನ್ನು ಒಳಗೊಂಡಿರುತ್ತವೆ. ಈ ಕಡತಗಳ ಸಹಾಯದಿಂದ ಅಂದಿನ ಮಠಗಳು ವಿದ್ಯಾರ್ಥಿಗಳಿಗೆ ಮತ್ತು ಸಾರ್ವಜನಿಕರಿಗೆ ಗ್ರಂಥಾಲಯವನ್ನೇ ನಿರ್ಮಿಸಿದವು.

### *ಕಾರ್ಯಾನುಭವ*

ಇನ್ನು ಕೆಲವು ಸಾಲಿಮಠಗಳಲ್ಲಿ ಇಂದೂ ಸಹ ಅಂದಿನಿಂದ ಉಳಿದು ಬಂದಿರುವ ಕೈಮಗ್ಗಗಳನ್ನು ಕಾಣಬಹುದಾಗಿದೆ. ಮಕ್ಕಳಿಗೆ ಬಟ್ಟೆ, ಜಮಖಾನ ಮತ್ತು ಕಂಬಳಿಗಳನ್ನು ನೇಯುವುದನ್ನು ಹೇಳಿಕೊಡಲಾಗುತ್ತಿತ್ತು. ವ್ಯವಸಾಯಕ್ಕೆ ಸಹಾಯವಾಗುವ ದಪ್ಪ ನೂಲನ್ನು ತೆಗೆಯುವುದು, ಹಗ್ಗಗಳನ್ನು ಹೊಸೆಯುವುದನ್ನು ಹೇಳಿಕೊಡುವುದರ ಜೊತೆಗೆ ಹುಬಿ (ಚೀಲ) ಹಡಪ, ಹಮ್ಮನಿ ಮೊದಲಾದವುಗಳನ್ನು ತಯಾರಿಸುವ ವಿಧಾನವನ್ನು ಕಲಿಸಲಾಗುತ್ತಿತ್ತು. ಕಡತ ಮತ್ತು ತಾಳೆಗರಿ ಪುಸ್ತಕಗಳ ಮೇಲ್ಭಾಗವನ್ನು ಬಣ್ಣಗೆಲಸದಿಂದ ಅಲಂಕರಿಸಬೇಕಿತ್ತು. ವೀರಶೈವರ ಧಾರ್ಮಿಕ ಗ್ರಂಥವಾದ ಉದ್ಧರಣೆ ಗ್ರಂಥದಲ್ಲಿರುವ ಷಟ್ಸ್ಥಲ ಸಿದ್ಧಾಂತವನ್ನು ಸಾಲಿಮಠಗಳಲ್ಲಿ ವರ್ಣಚಿತ್ರಗಳಲ್ಲಿ ನಿರೂಪಿಸಿರುವುದು ಕಂಡುಬರುತ್ತದೆ. ವಿದ್ಯಾರ್ಥಿಗಳು ಶ್ರೀಗಂಧದ ಮರದಲ್ಲಿ ಕರಡಿಗೆಗಳನ್ನು ಮಾಡುವುದನ್ನು ಸಹ ಕಲಿಯುತ್ತಿದ್ದರು. ಈ ವಸ್ತುಗಳಿಗೆ ಮಾರುಕಟ್ಟೆಯಲ್ಲಿ ವಿಶೇಷವಾದ ಬೇಡಿಕೆಯಿತ್ತು. ಕಸೂತಿ ಕೆಲಸ, ಬುಟ್ಟಿ ಮಾಡುವುದು, ಚಾಪೆ ಹೆಣೆಯುವುದನ್ನು ಕಲಿಯಬೇಕಿತ್ತು. ಸ್ಥಳೀಯ ಆವಶ್ಯಕತೆಗಳಿಗೆ ಅನುಗುಣವಾಗಿ ಮರಗೆಲಸ ಮತ್ತು ಕಮ್ಮಾರಿಕೆಗಳನ್ನು ಕಲಿಸಲಾಗುತ್ತಿತ್ತು. ಮರದಪಟ್ಟಿಗಳನ್ನು ಪುಸ್ತಕದ ಗಾತ್ರಕ್ಕೆ ಸರಿಯಾಗಿ ಕತ್ತರಿಸಲು ತರಬೇತಿಯನ್ನು ಬಡಗಿಗಳಿಗೆ ಕೊಡಲಾಗುತ್ತಿತ್ತು. ಇಷ್ಟೇ ಅಲ್ಲದೆ ಈ ಪುಸ್ತಕಗಳ ಮೇಲ್ಭಾಗದಲ್ಲಿ ಗ್ರಂಥಕರ್ತರ ಸೂಚನೆಯ ಮೇರೆಗೆ ರಂಗಿನ ಕುಸುರಿ ಕೆಲಸ ಮಾಡಬೇಕಿತ್ತು. ಬೇಡಿಕೆಗೆ ತಕ್ಕಂತೆ ನೂಲುವ ಚಕ್ರಗಳನ್ನೂ ಕೈಮಗ್ಗಗಳನ್ನೂ ತಯಾರು ಮಾಡಲಾಗುತ್ತಿತ್ತು. ಇವಲ್ಲದೆ ವಿದ್ಯಾರ್ಥಿಗಳು ವ್ಯವಸಾಯಕ್ಕೆ ಬೇಕಾಗುವ ಉಪಕರಣಗಳನ್ನು ಮಾಡಿ ಅವನ್ನು ಹೊಲಗಳಲ್ಲಿ ಬಳಸಬೇಕಿತ್ತು. ಇಂದೂ ಸಹ ಅನೇಕ ಹಳ್ಳಿಗಳಲ್ಲಿ ಮರಗೆಲಸಗಳನ್ನು ಸಾಲಿಮಠಗಳಲ್ಲಿ ಮಾಡಲಾಗುತ್ತಿದೆ. ಉಕ್ಕಿನ ಲೇಖನಿಗಳನ್ನು ತಾಳೆಗರಿಗಳ ಮೇಲೆ ಬರೆಯಲು ಸಾಧ್ಯವಾಗುವಂತೆ ವಿದ್ಯಾರ್ಥಿಗಳು ತಯಾರು ಮಾಡುತ್ತಿದ್ದರು. ಕಂತೆ ಮಾಡಲ್ಪಟ್ಟ ಲಿಂಗಗಳ ಮೇಲೆ ಹೊಳಪು ಮಾಡಲು ಸಹಾಯಕವಾಗುವ ಪುಟ್ಟ ಕರಣೆಗಳನ್ನೂ ಸಹ ಅಂದಿನ ವಿದ್ಯಾರ್ಥಿಗಳು ಮಾಡುವುದನ್ನು ಕಲಿಯಬೇಕಿತ್ತು. ವ್ಯವಸಾಯಕ್ಕೆ, ಕಬ್ಬಿಣದ ಉಪಕರಣಗಳನ್ನು ಮಾಡುವುದನ್ನೂ ಕಲಿಯಬೇಕಾಗಿತ್ತು. ಅಂದು ಮಠಗಳಲ್ಲಿ ತಯಾರಾದ ಉಪಕರಣಗಳಿಗೆ ಮಾರುಕಟ್ಟೆಯಲ್ಲಿ ಅತಿಶಯವಾದ ಬೇಡಿಕೆಯಿತ್ತು ಎಂಬುದು ಐತಿಹಾಸಿಕ ದಾಖಲೆಗಳಿಂದ ತಿಳಿದು ಬರುತ್ತದೆ. ಕೆಲವು ಮಠಗಳು ಕೃಷಿವಿಜ್ಞಾನವನ್ನು ವಿಶೇಷವಾಗಿ ಹೇಳಿಕೊಡುತ್ತಿದ್ದವು. ಕೃಷಿವಿಜ್ಞಾನಪ್ರದೀಪಕ ಎಂಬುದು ಕೃಷಿವೃತ್ತಿಯ ಬಗೆಗಿನ ವಿಶಿಷ್ಟ ಜ್ಞಾನವನ್ನು ನಿರೂಪಿಸುವ ಉತ್ತಮ ಗ್ರಂಥವಾಗಿತ್ತು. ಪ್ರಥಮ ಚಿಕಿತ್ಸೆಯನ್ನು ಕುರಿತ ವೈದ್ಯಕೀಯ ಜ್ಞಾನವನ್ನು ಮಕ್ಕಳಿಗೆ ಒದಗಿಸಲಾಗುತ್ತಿತ್ತು. ಇಂದೂ ಸಹ ಅನೇಕ ಮಠಗಳು ಎಲಬು ಮುರಿಯುವಿಕೆ ಮತ್ತು ಮಕ್ಕಳ ರೋಗಗಳಿಗೆ ಚಿಕಿತ್ಸೆಯನ್ನು ನೀಡುತ್ತಿವೆ.

ಕರ್ನಾಟಕದ ಸಂಸ್ಕೃತಿಯ ವಿಶಿಷ್ಟ ಲಕ್ಷಣವೆಂದರೆ, ಅಸಂಖ್ಯಾತ ಮಠಗಳನ್ನು ಹೊಂದಿರುವುದು, ಭಾರತದ ಇನ್ನಾವ ಭಾಗದಲ್ಲೂ ಇಷ್ಟು ಸಂಖ್ಯೆಯಲ್ಲಿ ಮಠಗಳು ಕಂಡುಬರುವುದಿಲ್ಲ. ಮಠಗಳು ಜನಪ್ರಿಯಗೊಂಡುದು, ಅವು ಧಾರ್ಮಿಕ ಕೇಂದ್ರಗಳಾದ್ದರಿಂದಲ್ಲದೆ ಶಿಕ್ಷಣ ಪ್ರಚಾರ ಕೇಂದ್ರಗಳಾದ್ದರಿಂದಲೂ ಸಹ. ಪ್ರತಿಯೊಂದು ಮಠವೂ ಗುರುವಿನ ನೇತೃತ್ವದಲ್ಲಿ ಶ್ರೀಸಾಮಾನ್ಯನಿಗೆ ಜ್ಞಾನದ ದಾಸೋಹ ಮಾಡುವ ಪುಣ್ಯಕಾರ್ಯದಲ್ಲಿ ಭಾಗಿಯಾಗುತ್ತಿದ್ದವು. ತಮ್ಮ ಶೈಕ್ಷಣಿಕ ಚಟುವಟಿಕೆಗಳನ್ನು ಪಟ್ಟಣ ನಗರಗಳಿಗೆ ಸೀಮಿತಗೊಳಿಸದೆ ಹಳ್ಳಿಹಳ್ಳಿಗಳಲ್ಲೂ ವ್ಯಾಪಿಸುವಂತೆ ಮಾಡಿ ಸಮಾಜದ ಬಹುತೇಕ ಜನರಿಗೆ ಶಿಕ್ಷಣ ಒದಗಿಸುವ ವ್ಯವಸ್ಥೆಯನ್ನು ಅನುಗೈದಿದ್ದವು. ಸಾಲಿಮಠಗಳು ಕರ್ನಾಟಕದಾದ್ಯಂತ ಸ್ಥಾಪಿತವಾಗಿರುವುದು ಕಂಡುಬರುತ್ತದೆ. ಆಂಗ್ಲರ ಆಗಮನದಿಂದ ಈ ಶಿಕ್ಷಣಕ್ಕೆ ಬರಸಿಡಿಲು ಬಡಿಯಿತು. ಇಂದೂ ಸಹ ಕೆಲವು ಹಳ್ಳಿಗಳಲ್ಲಿ ಸಾಲಿಮಠಗಳು ನೆರೆಹೊರೆಯವರಿಗೆ ಶಿಕ್ಷಣ ಒದಗಿಸುತ್ತಿದ್ದವು ಎಂಬುದಕ್ಕೆ ಜೀವಂತ ಸಾಕ್ಷಿಗಳಾಗಿವೆ.

*(ಮುಂದುವರಿಯುತ್ತದೆ)*

## ವಚನಗಳ ವಿಶ್ಲೇಷಣೆ

*ಅಲಿಂಗದಿಚ್ಚೆಗೆ ಮದ್ದು ಮಾಂಸವ ತಿಂಬರು*
*ಕಂಗಳಿಚ್ಚೆಗೆ ಪರವಧುವ ನೆರೆವರು !*
*ಲಿಂಗಲಾಂಛನದಾರಿಯಾದಲ್ಲಿ ಫಲವೇನು?*
*ಲಿಂಗಪಥವ ತಪ್ಪಿ ನಡೆವರು !*
*ಜಂಗಮ ಮುಖದಿಂದೆ ನಿಂದೆ ಬಂದರೆ*
*ಕೊಂಡ ಮಾರಿಂಗೆ ಹೋಹುದು ತಪ್ಪದು*
*ಕೂಡಲಸಂಗಮದೇವ !*

ಕಾಮಾತುರಗೊಂಡು, ಕಾಯ ಗಟ್ಟಿಯಾಗಲೆಂದು – ಮದನೋದ್ದೀಪಕವಾದ ಮದ್ದನ್ನೂ ಮಾಂಸವನ್ನೂ ತಿನ್ನುವರು. ಕಂಗಳು ತಪ್ಪಿ ಹೆರವರ ಹೆಂಗಳನ್ನು ತಬ್ಬುವರು. ಇಂಥವರು ಲಿಂಗನು ಧರಿಸಿ ಫಲವೇನು? ಅವರು ಹಿಡಿದ ಹಾದಿ ಲಿಂಗ ಮಂಗಲಮಾರ್ಗವಲ್ಲ? ದೊಡ್ಡವರ ಕಡೆಯಿಂದ ಮೆಚ್ಚುಗೆಯನ್ನು ಗಳಿಸುವ ಬಾಳನ್ನು ಬದುಕದೆ, ಅವರಿಂದ ಛೀ ಎನಿಸಿಕೊಂಡರೆ, ಶಿವನ ಕೃಪೆಯಿಂದ ಪಡೆದ ಈ ಬದುಕು ಬೆಲೆಬಾಳದೇ ಹೋಗುವುದು.

*ತನಗೆ ಮುನಿವರಿಗೆ ತಾ ಮುನಿಯಲೇಕಯ್ಯ?*
*ತನಗಾದ ಆಗೇನು ಅವರಿಗಾದ ಚೇಗೇನು*
*ತನುವಿನ ಕೋಪ ತನ್ನ ಹಿರಿತನದ ಕೇಡು !*
*ಮನದ ಕೋಪ ತನ್ನ ಅರಿವಿನ ಕೇಡು !*
*ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ*
*ನೆರೆಮನೆಯ ಸುಡದು ಕೂಡಲಸಂಗಮದೇವ !*

ತನ್ನ ಮೇಲೆ ಕೋಪಗೊಂಡವರ ಮೇಲೆ ತಾನು ಕೋಪ ಗೊಂಡರೇನು ಬಂತು ! ನಾವು ಮಾಡಿದ ಕೋಪದಿಂದ ನಮಗಾದ ಲಾಭವೇನು? ಅವರಿಗಾದ ನಷ್ಟವೇನು? ನಮ್ಮಲ್ಲಿ ಉದಿಸಿದ ಕೋಪವೆಂಬ ಕಾಯವಿಕಾರದಿಂದ ನಮ್ಮ ಘನತೆಗೇ ಕೇಡು ! ನಮ್ಮಲ್ಲಿ ಉದಿಸಿದ ವೈರವೆಂಬ ಮನೋವಿಕಾರದಿಂದ ನಮ್ಮ ಅರಿವಿಗೇ ಕೇಡು ! ಮನೆಯೊಳಗೆ ಹುಟ್ಟಿದ ಬೆಂಕಿ ಮೊದಲು ಆ ಮನೆಯನ್ನೆಲ್ಲ ವ್ಯಾಪಿಸಿ ಸುಟ್ಟಲ್ಲದೆ, ನೆರೆಮನೆಯನ್ನು ಸುಡಲಾರದು – ಅಂತೆಯೇ ನಮ್ಮಲ್ಲಿ ಉಂಟಾದ ಕೋಪವೈರಗಳು ನಮ್ಮನ್ನು ಮೊದಲು ಸರ್ವನಾಶಪಡಿಸಿದಲ್ಲದೆ ಅನ್ಯರನ್ನ ನಾಶ ಪಡಿಸುವುದಿಲ್ಲ.

ಆದುದರಿಂದ ಪರರನ್ನು ನಾಶಪಡಿಸುವ ನಶೆಯಲ್ಲಿ ನಿನ್ನನ್ನು ನೀನೇ ನಾಶಪಡಿಸಿಕೊಳ್ಳಬೇಡ. ನಿನ್ನಲ್ಲಿ ಪ್ರತೀಕಾರ ಮನೋಭಾವವಿಲ್ಲದಿದ್ದರೆ ಇದಿರಾಳಿಗಳು ತಮ್ಮ ತಪ್ಪನ್ನು ತಿಳಿದು ತಿಳಿಯಾಗಿ ಬಾಳಿಯಾರು, ನೀನೂ ಬಾಳುವೆ ! ಇದರಿಂದ ನಿನ್ನ ಬಾಳುವೆ ದುಪ್ಪಟ್ಟು ಫಲದಾಯಕವಾಗುವುದು.

*ಧನದಲ್ಲಿ (ನಿರಾಶೆ) ಪ್ರಾಣದಲ್ಲಿ ನಿರ್ಭಯ*
*ಇದಾರಿಂಗಳವಡುವುದಯ್ಯ? !*
*ನಿಧಾನ ತಪ್ಪಿ ಬಂದರೆ ಒಲ್ಲೆನೆಂಬವರಿಲ್ಲ !*
*ಪ್ರಮಾದ ವಶ ಬಂದರೆ ಹುಸಿಯೆನೆಂಬವರಿಲ್ಲ !*
*ನಿರಾಶೆ-ನಿರ್ಭಯ, ಕೂಡಲಸಂಗಮದೇವ,*
*ನೀನೊಲಿದ ಶರಣಂಗಲ್ಲದಿಲ್ಲ !*

ಹಣಕ್ಕೆ ಆಶೆ ಮಾಡದವರಾರು ! ಸಾವಿಗೆ ಭಯಪಡದವ ರಾರು? ತಪ್ಪುದಾರಿಯಿಂದ ಲಕ್ಷ್ಮಿ ಬಂದು ತನ್ನೆದುರಿನಲ್ಲಿ ನಿಂತಾಗ ನಿಷ್ಕಾಂಕ್ಷೆಯ ನಿಲುವನ್ನು ಯಾರು ತಳೆದಾರು? ಮರಣದಂಡನೆ ಯಾಗುವುದೆಂದಾಗಲೂ ಸತ್ಯಕ್ಕೆ ಅಪಚಾರವೆಸಗುವ ಸುಳ್ಳನ್ನು ನಾಲಗೆಗೆ ತಾರೆನೆಂದು ಯಾರು ಧೀರವಾಗಿ ನಿಂತಾರು? ಈ ನಿಷ್ಕಾಂಕ್ಷೆ, ನಿರ್ಭಯಗಳೆರಡನ್ನೂ ತಮ್ಮ ಜೀವಿತದಲ್ಲಿ ಅಳವಡಿಸಿಕೊಂಡ ಮಹನೀಯರಾರು? ಅಂಥವರು ಶಿವಶರಣರಲ್ಲದೆ ಮತ್ತಾರು? !

*ಲೋಕದ ಡೊಂಕ ನೀವೇಕೆ ತಿದ್ದುವಿರಿ?*
*ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ !*
*ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ !*
*ನೆರೆಮನೆಯ ದುಃಖಕ್ಕೆ ಅಳುವರ ಮೆಚ್ಚ*
*ನಮ್ಮ ಕೂಡಲಸಂಗಮದೇವ.*

ಮಾತೆತುಲೇ ಲೋಕದ ಓರೆಕೋರೆಗಳನ್ನು ತಿದ್ದುವ ತಿಳಿಗೇಡಿತನವೇಕೆ ನಿಮಗೆ? ಮೊದಲು ನಿಮ್ಮ ಆಚರಣೆಗಳನ್ನು ತಿದ್ದಿಕೊಳ್ಳಿ, ನಿಮ್ಮ ನಿಮ್ಮ ಆಲೋಚನೆಗಳನ್ನು ತಿದ್ದಿಕೊಳ್ಳಿ. ತನ್ನೊಬ್ಬನನ್ನೇ ಉತ್ತಮಪಡಿಸಿಕೊಳ್ಳಲಾರದವನು ಲೋಕೋದ್ಧಾರ ವನ್ನು ಹೇಗೆ ಮಾಡಿಯಾನು? ಪ್ರತಿಯೊಬ್ಬನೂ ತನ್ನ ಮನ ಮತ್ತು ಮನೆಯನ್ನು ನೇರ್ಪಡಿಸಿಕೊಳ್ಳಲಿ. ಈ ವ್ಯಷ್ಟಿಹಿತದಿಂದ ಸಮಷ್ಟಿ ಹಿತವು ತಾನಾಗಿಯೇ ಸಿದ್ಧಿಸುವುದು ಅಥವಾ ಆ ಸಮಷ್ಟಿಯ ಹಿತವನ್ನು ಸಾಧಿಸುವ ಸಾಮರ್ಥ್ಯ ವ್ಯಷ್ಟಿಗೇ ಸಿದ್ಧಿಸೀತು!

ತನ್ನ ಮನೆಯ ದುಃಖವನ್ನೇ ಪರಿಹರಿಸಿಕೊಳ್ಳಲಾರದವನು ಇನ್ನೊಬ್ಬರ ಮನೆಯ ದುಃಖವನ್ನು ನಿವಾರಿಸಲೆಂದು ಬರಿದೆ ಕಣ್ಣೀರು ಕರೆದರೇನು ಪ್ರಯೋಜನ? !

*ವೀರ-ವ್ರತಿ-ಭಕ್ತನೆಂದು ಹೊಗಳಿಸಿಕೊಂಬಿರಿ ಕೇಳಿರಯ್ಯ :*
*ವೀರನಾದರೆ ವೈರಿಗಳು ಮೆಚ್ಚಬೇಕು !*
*ವ್ರತಿಯಾದರೆ ಅಂಗನೆಯರು ಮೆಚ್ಚಬೇಕು !*
*ಭಕ್ತನಾದರೆ ಜಂಗಮ ಮೆಚ್ಚಬೇಕು !*
*ಈ ನುಡಿಯೊಳಗೆ ತನ್ನ ಬಗೆಯಿರೆ*
*ಬೇಡಿದ ಪದವಿಯನೀವ ಕೂಡಲಸಂಗಮದೇವ !*

ವೀರಾಗ್ರೇಸರ, ಆಜನ್ಮ ಬ್ರಹ್ಮಚಾರಿ, ಭಕಶಿರೋಮಣಿ ಎಂದು, ಹಿಂತೆಗೆಯದೆ ಮಂದಿಯಿಂದ ಹೊಗಳಿಸಿಕೊಳ್ಳ ಬಹುದು ! ತನ್ನ ಅಹಂಕಾರದ ಕಿಚ್ಚಿಗೆ ವಂದಿ. ಮಾಗಧರ ಎರವಲು ಮಾತಿನ ಉರುವಲನ್ನು ಸುರಿವಿ, ಧಗಧಗನೆ ಉರಿದು ಮೆರೆಯುವ ಪ್ರಶಸ್ತಿ ಪರೋಪಜೀವಿಯೇ ಕೇಳು : ನೀನು ವೀರನಾದರೆ ಬತ್ತೀಸಾಯುಧಗಳ ವರಸೆಯಲ್ಲಿ ಬಲ್ಲಿದನಾದ ವೈರಿ ಪರಾಜಿತನಾಗಿ ನಿನ್ನನ್ನು ಜಯ-ಜೀಯ ಎನ್ನಬೇಕು ! ನೀನು ಆಜನ್ಮ ಬ್ರಹ್ಮಚಾರಿಯಾದರೆ, ವ್ಯಾಮೋಹಪ್ರಪಂಚಪರಿಣತೆ ಯಾದ ರೂಪಸಿ ನಿನ್ನನ್ನು ತನ್ನ ತೆಕ್ಕೆಗೊಳಗುಮಾಡಿಕೊಳ್ಳಲರಿಯದೆ ಚರಣದಾಸಿಯಾಗಿ ನಿನ್ನ ಪಾದ ಪೂಜಿಸಬೇಕು. ನೀನು ಭಕಶಿರೋಮಣಿಯಾದರೆ ಕಾಡಿ ಬೇಡುವ ಜಂಗಮ ತಣಿದು ತಲೆದೂಗಬೇಕು. ಈ ಮಾತಿಗೆ ನೇರವಾಗುವ ನಡೆಯಿದ್ದರೆ – ಬೇಡಿದ ಪದವಿಯನ್ನಿತ್ತು ಮೃಡನೊಲಿಯುವನು.

– ಸಂ. ಡಾ. ಎಲ್. ಬಸವರಾಜು

*(ಕೃಪೆ : ಬಸವ ವಚನಾಮೃತ)*







## ರಸಿಕತೆ

– ಎಂ.ಜಿ. ನಾಗರಾಜ್
ಸಂಪಾದಕರು, ಮಹಾಮನೆ
221, 68ನೇ ಕ್ರಾಸ್, 5ನೇ ಬ್ಲಾಕ್
ರಾಜಾಜಿನಗರ, ಬೆಂಗಳೂರು-560 010

ದಿನನಿತ್ಯದ ಸಾಂಸ್ಕೃತಿಕ ವ್ಯವಹಾರಗಳಲ್ಲಿ ಸಂತೋಷವನ್ನು ಅನುಭವಿಸುವುದು ರಸಿಕತೆ. ತನ್ನ ಇಚ್ಛೆಯ ಸಂಗತಿಗಳಲ್ಲಿ ಮಾನವ ಮುದ ಪಡೆಯುವುದು ರಸಿಕತೆ-ರಸಿಕಪ್ರವೃತ್ತಿ. ಯಾರಿಗೆ ತಮ್ಮ ಪ್ರವೃತ್ತಿಯಲ್ಲಿ ಆನಂದ ಪಡೆದುಕೊಳ್ಳುವರೋ ಅವರು ರಸಿಕರು. ಅವರು ತಮ್ಮ ಇಚ್ಛಿತ ವಸ್ತುಗಳಲ್ಲಿ ಸೌಂದರ್ಯ ಕಾಣುತ್ತಾರೆ. ಅಂತಾಗಿ ರಸಿಕತೆ-ಸೌಂದರ್ಯ ಸಹಯೋಗವಾದವು. ಊಟ, ಆಟ, ನೋಟ, ಶ್ರವಣ, ಮಾತು ಕೃತಿಗಳಲ್ಲಿ ರಸಭಾವ ಹೊಂದುವುದು ರಸಿಕ ಪ್ರವೃತ್ತಿಯೆ. ರುಚಿಕಟ್ಟಾದ ಊಟ ಸವಿಯುವುದು, ಕೇಳಿದಾಗ ಗಾನ-ವಾದ್ಯಗಳಿಂದ ಮುದಗೊಳ್ಳುವುದು, ನಾಟಕ, ಸಿನಿಮಾಗಳಲ್ಲಿನ ಅಭಿನಯವನ್ನು ಆನಂದಿಸುವುದು, ಚಿತ್ರಕಲೆ, ಶಿಲ್ಪಗಳನ್ನು ಕಂಡು ಭಾವ ವಿಶೇಷ ಪಡೆಯುವುದು, ಸಾಹಿತ್ಯ-ಕಾವ್ಯ ಓದಿ ರಸಾನುಭವ ಪಡೆಯುವುದು ಇವೆಲ್ಲ ರಸಿಕತೆಯ ಲಕ್ಷಣಗಳೆ ಆಗಿವೆ.

ರಸಿಕನಿಗೆ ರಸಭಾವ ಹುಟ್ಟುವುದು ಸಹಜ. ರಸವು ಅನುಭವ ವೇದ್ಯ. ಸುಖ ದುಃಖ ಸ್ವಭಾವಗಳನ್ನು ಹೊಂದಿ ಆಸ್ವಾದವಾಗುವುದು ರಸ. ರಸಭಾವಗಳನ್ನು ಅನುಭವಿಸುವ ಕವಿ, ನಟ, ಗಾಯಕ, ಕಲಾಕಾರ, ಕ್ರೀಡಾಪಟು, ವಿದ್ವಾಂಸ ಇವರೆಲ್ಲ ಅನುಕ್ರಮವಾಗಿ ಕಾವ್ಯ, ಸಾಹಿತ್ಯ, ಅಭಿನಯ, ಸಂಗೀತ, ಚಿತ್ರಕಲೆ, ಶಿಲ್ಪ, ಕ್ರೀಡೆ, ಶಾಸ್ತ್ರ ಮಾಧ್ಯಮಗಳಲ್ಲಿ ರಸಭಾವದ ಮೂರ್ತಿ ಸ್ವರೂಪವನ್ನು ಮುಂದಿಡುತ್ತಾರೆ. 'ರಸ' ಅನುಭವಕ್ಕೆ ಒದಗಿದ್ದು, ರಸಿಕತೆ ಅನುಭವಿಸುವ ಪಾತ್ರಧಾರಿಯದು. 'ರಸ'ದ ಗುಣವಾಚಕ ವಿಶೇಷ ರಸಿಕತೆ.

'ರಸಿಕನಾಡಿನ ಮಾತು ಶಶಿಯುದಿಸಿ ಬಂದಂತೆ' – ಎಂಬ ವಚೋವಾಜ್ಞಯ, ರಸಿಕನ ಹಾಗೂ ಪ್ರಕೃತಿಯ ಆನಂದದ ಸ್ತರ ಸಂಬಂಧವನ್ನು ಸೂಚಿಸುತ್ತದೆ. ಚಂದ್ರ ಉದಿಸಿ ಬರುವಾಗ ಬಣ್ಣದ ಕಳೆ, ಸಂತೋಷ, ಉಲ್ಲಾಸ ತರುತ್ತದೆ. ಇಂತಹ ಮುದವನ್ನು ರಸಿಕನ ಮಾತು ತಂದು ಕೊಡುತ್ತದೆ. ಜನಹೃದಯ ಮುಟ್ಟುತ್ತದೆ. ರಸಿಕರೂ ಹೀಗೆ ತೆರೆದು ಕೊಡಬಲ್ಲವರೆ ! ಅಂದರೆ ಕವಿ-ಸಹೃದಯ, ಗಾಯಕ- ಶೋತೃ, ನಟ-ಪ್ರೇಕ್ಷಕ ಇವರ ಸಂಬಂಧಗಳು ಸಮಶೃತಿ ವೀಣೆಗಳಂತೆ. ಒಂದು ಮಿಡಿದರೆ ಅದೇ ಶೃತಿಯ ಇನ್ನೊಂದು ವೀಣೆಯು ತಾನೇ ತಾನಾಗಿ ಮಿಡಿಯುತ್ತದೆ. ಕವಿಯ ಸೃಷ್ಟಿಕಾರ್ಯ, ಸಹೃದಯನ ಅನುಸೃಷ್ಟಿಯ ಕಾರ್ಯ, ಸಹಕಾರಗೊಂಡಾಗ, ಸಾಕಾರ ಗೊಂಡಾಗ ಇಂತಹ ಮಿಡಿತ ಸಾಧ್ಯ. ಇಲ್ಲವಾದರೆ ಏಕೆ ಮುಖಸಂಚಾರವಾಗಿ ಸ್ಪಂದನ ಶೀತಲವಾಗುತ್ತದೆ. ಕಾವ್ಯ ಬರೆದ ಕವಿ ತಾನು ಅನುಭವಿಸಿದ ಸೌಂದರ್ಯಾನುಭವವನ್ನು ಸಹೃದಯನಲ್ಲಿ ಪ್ರೇರಿಸಿದರೆ ರಸಿಕತೆಗೆ ಔನ್ನತ್ಯ, ಔಚಿತ್ಯ. ಅಂದರೆ ರಸಿಕತೆ-ಸೌಂದರ್ಯ ಪರಸ್ಪರ ಸಮ್ಮುಖ ಸಂಚಾರದವು.

ಭಾರತೀಯ ಕಾವ್ಯಮೀಮಾಂಸೆಯ ರೀತ್ಯಾ ಸೌಂದರ್ಯ ಎಂಬುದು ಆನಂದದ ಅನುಭಾವ ವಿಶೇಷ. ಸಹೃದಯನಿಗೆ ಈ ರಸಾನುಭವ ವಿಶೇಷವನ್ನು ಯಾವುದು ಕೊಡಬಲ್ಲದೋ ಅದೆಲ್ಲ ಸುಂದರವೆ. ರಸಗಂಗಾಧರಕಾರನ ರೀತ್ಯಾ, ಸೌಂದರ್ಯವೆಂದರೆ ಆನಂದ ಜನಕ ಗುಣ ಹೊಂದಿರುವುದು. ಸಹೃದಯನ ಹೃದಯವೇ ಅದಕ್ಕೇ ಸಾಕ್ಷಿ. ಸೌಂದರ್ಯಾನುಭವದಿಂದ ಒದಗುವ ಆನಂದ ಕೇವಲ ಪ್ರಯೋಜನಕಾಂಕ್ಷಿ ಅಲ್ಲ. ಸೌಂದರ್ಯ ಕಾಣಲು ವ್ಯಾವಹಾರಿಕ ದೃಷ್ಟಿಯಿಂದ ದೂರವಿರಬೇಕು. ಮದಿಸಿದ ಮೋಡಗಳಿಂದ ಕವಿದ ಗಗನ, ಕುಂಭದ್ರೋಣ ಮಳೆಧಾರೆ ಅರ್ಜುನ ವೃಕ್ಷಗಳ ಮೇಲೆ ಸುರಿಸುರಿದು ಬಾಗಿರುವ ಅರಣ್ಯಗಳು, ತುಂಬಿ ಹರಿವ ಹೊಳೆ ಮನಸ್ಸನ್ನು ಸೆರೆ ಹಿಡಿಯುತ್ತವೆ. ಕಾಣುವ ಕಣ್ಣು, ಕೇಳುವ ಕಿವಿ, ಅನುಭವಿಸುವ ಮನಸ್ಸು, ಮಿಡಿವ ಹೃದಯವಿದ್ದರೆ ಸೌಂದರ್ಯ ಸಲ್ಲದ ಎಡೆ ಇಲ್ಲ. ರಸಿಕನಿಗೆ ಕ್ಷಣಕ್ಷಣಕ್ಕೆ ಸಲ್ಲುವ ರಸಭಾವ ಶೋಭೆ ಸಮುದಾಯ ಸೌಂದರ್ಯದ ಸಾಕ್ಷಾತ್ಕಾರಕ್ಕೆಳಸುತ್ತದೆ.

ರಸಿಕತೆಗೆ ನೆಲೆಯಾದ ಕಾವ್ಯಕಲೆಗಳ ಬಗ್ಗೆ ಇರುವ ಆರೋಪವನ್ನು ಮೀಮಾಂಸಕಾರ ರಾಜಶೇಖರ ಸಂಗ್ರಹಿಸಿ ಹೇಳಿದ್ದಾನೆ : ಕಾವ್ಯ ಸುಳ್ಳನ್ನು ಹೇಳಿ ಕೆಟ್ಟದನ್ನು ಬೋಧಿಸುತ್ತದೆ.

ಅಶ್ಲೀಲವನ್ನು ವರ್ಣಿಸುತ್ತದೆ. ಇದು ನಿಜವಾದಲ್ಲಿ, ರಸ, ಸೌಂದರ್ಯ ಆನಂದದ ನೆಲೆ ಕಾವ್ಯಾದಿ ಸಂಗತಿಗಳ ಅವಶ್ಯಕತೆಯೆ ಇಲ್ಲವೆಂದಾಗುತ್ತದೆ. ಆಗ ವಿವೇಚನೆ ಅಗತ್ಯ –

ದರ್ಶನವಿಲ್ಲದವ ಕವಿ ಆಗಲಾರ. ಶಾಸ್ತ್ರಕ್ಕೆ ನಿಲುಕದ ಎಷ್ಟೋ ಸತ್ಯಗಳು ಕವಿಗೆ ಗೋಚರವಾಗುತ್ತದೆ. ಶಾಸ್ತ್ರ ಸತ್ಯದ ಒಂದು ಮುಖ ತೋರಿದರೆ ಕಾವ್ಯ ಅದರ ಇನ್ನೊಂದು ಮುಖ ತೋರುತ್ತದೆ. ಅಂತಾಗಿ ಎರಡರ ಸಹಯೋಗ ಅಗತ್ಯ. ಲೋಕದಲ್ಲಿ ಗುಣ ದೋಷ ಎರಡೂ ಉಂಟು. ಕಾವ್ಯ ಒಂದು ದೀಪವಿದ್ದಂತೆ. ವಿವೇಕಿ ಮನೆ, ಮನ ಬೆಳಗಿಸಿಕೊಂಡರೆ ಅವಿವೇಕಿ ಕೈಸುಟ್ಟುಕೊಳ್ಳುತ್ತಾನೆ. ಅಶ್ಲೀಲತೆ ಕಾಲದಿಂದ ಕಾಲಕ್ಕೆ ರೂಪನಿರ್ಣಯ ಪಡೆಯುವಂತಹುದು. ಶೃಂಗಾರ ವಿಶ್ವಮೋಹಕ ರಸ. ಅಲ್ಲಿ ಔಚಿತ್ಯ ಅನೌಚಿತ್ಯಗಳ ಗೆರೆ ಸೂಕ್ಷ್ಮ. ಕವಿವಾಚ್ಯಕ್ಕಿಂತ ವ್ಯಂಗಮಾರ್ಗ ಅನುಸರಿಸಿ ಔಚಿತ್ಯ ಕಂಡುಕೊಳ್ಳುವುದು ವಿಹಿತ.

ಜನ್ನನ ಚಂಡಶಾಸನ ಕತೆಯಲ್ಲಿ ಸ್ನೇಹಿತನ ಸುಂದರ ಸತಿಯನ್ನು ಬಲವಂತವಾಗಿ ಒಯ್ದಾಗ ಆಕೆ ಮರಣವನ್ನಪ್ಪುತ್ತಾಳೆ. ಶವದೊಡನೆ ಅವನ ಮಿಲನವನ್ನು ಕಾವ್ಯವಲಯದಲ್ಲಿ ಸಮರ್ಥಿಸಿಕೊಂಡರೂ ಔಚಿತ್ಯದ ಗೆರೆ ಆಗಬಲ್ಲುದೆ ! ರಸಿಕನ ಸೌಂದರ್ಯಾಸ್ವಾದ ಬೇರೆ, ವಿಪರೀತ ರತಿ, ವಿಕೃತ ರತಿ ಬೇರೆ. ಎದುರು ಬಂದ ಸುಂದರ ಸ್ತ್ರೀಯ ಸೌಂದರ್ಯ ನೋಡುವುದು ಅಸಭ್ಯವಾಗದಿರ ಬಹುದು. ಆದರೆ ಭೋಗಕ್ಕೆ ಬಯಸಿದರೆ ನಮ್ಮ ಸಂಸ್ಕೃತಿಗೆ ಒಗ್ಗದ ಸೌಂದರ್ಯಾನುಭವ. ಹಾಗಾಗಿ ನಿಸರ್ಗದ ಸುಂದರ ವಸ್ತುಗಳ ಆಸ್ವಾದಕ್ಕೆ ಒಪ್ಪಿತ ಮಾರ್ಗಗಳಿವೆ. ಅದು ರಸಿಕತೆಯ ವಿಕೃತ ನೋಂದಣಿ ಮೂಲಕ ಅಲ್ಲ.

ಅಹ । ನಾಕವೆ ನಮ್ಮ ಲೋಕಕೆ ಕಳಚಿ ಬಿದ್ದಿದೆ ಬನ್ನಿರಿ । ತುಂಬಿಕೊಳ್ಳಲು ನಿಮ್ಮ ಹೃದಯದ ಹೊನ್ನಬಟ್ಟಲ ತನ್ನಿರಿ ಎಂಬ ಕುವೆಂಪು ಅವರ ಸಾಲು;

ಮೋಹದ ಮನಕೆ ಪ್ರೇಮದ ಕಿಡಿ ಹೊತ್ತಿದವೊಲು ಪ್ರಿಯೆ ಈ ತಮಕೆ ತಾರಗೆಯಾಯ್ತು ಎಂದು ಸಂಧ್ಯಾ ಸೌಂದರ್ಯ ಕುರಿತ ಪು.ತಿ.ನ. ಸಾಲು.

ಮಾವನ ಮಗಳೆ, ಕೆಂದಾವ್ರೆ ಮೊಗದೋಳೆ, ಬಾಯಾರಿ ಬಂದೆ ಕೊಡು ನೀರೆ । ಎಂಬ ಹಳ್ಳಿಹಾಡುಗಳ ಸಾಲುಗಳಲ್ಲಿ ರಸಿಕತೆ ವ್ಯಷ್ಟಿ-ಸಮಷ್ಟಿಗಳ ನಡುವಣ ಸಂವೇದನೆಯಾಗಿ ಕಾಣುತ್ತದೆ. ಅಂತರಂಗ ಬಹಿರಂಗ ಸೌಂದರ್ಯಗಳ ಸಂಗಮವನ್ನು ತೋರುತ್ತದೆ.

❀

## ನುಡಿ ನಮನ

ನಾಡಿನ ಮೂಲೆ ಮೂಲೆಗಳಿಂದ ಅನಾಥರನ್ನು ಬರಮಾಡಿ ಕೊಂಡು, ಅವರಿಗೆಲ್ಲ ಅನ್ನದಾನದ ಜೊತೆಯಲ್ಲಿ ಜ್ಞಾನವನ್ನು ದಾನಮಾಡುತ್ತಿರುವ ದೃಶ್ಯವಂತೂ ನನ್ನ ಪಾಲಿಗೆ ಅಸಾಮಾನ್ಯ ನೋಟವೆನಿಸಿದೆ. ಅಸಂಖ್ಯಾತ ಬಡಬಗ್ಗರ ಇಂತಹ ಆವಶ್ಯಕತೆ ಗಳನ್ನು ಪೂರೈಸುತ್ತಿರುವುದು ಮಾತ್ರವಲ್ಲ, ಅವರ ''ಪರ''ವನ್ನು ಸಹ ಈ ಕಾವಿಗೆ ಋಣಿಯನ್ನಾಗಿ ಮಾಡುತ್ತಿರುವ ಕರ್ಮಭೂಮಿ ಇದಾಗಿದೆ. ಸಿದ್ಧಗಂಗಾ ಕ್ಷೇತ್ರದ ಸಾಧನೆಗೆ ನನ್ನಂತಹ ಒಬ ಲೇಖಕನ ಪ್ರಶಂಸೆ ಬೇಕಾಗಿಯೇ ಇಲ್ಲ ಎಂಬಷ್ಟು ದೊಡ್ಡ ಸಾಧನೆ ಅವರದಾಗಿದೆ (ಶ್ರೀಗಳವರದು)

- ಡಾ. ಕೆ. ಶಿವರಾಮ ಕಾರಂತ
ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರು

ಎಲ್ಲೋ ಒಂದು ಗುಡಿಸಲಲ್ಲಿ ಹುಟ್ಟಿ, ಕ್ರಿಮಿಯಂತೆ ಬಾಳ ಬೇಕಾಗಿದ್ದ ನಾನು ಸಾರ್ವಜನಿಕ ಜೀವನದಲ್ಲಿ ತಲೆಯೆತ್ತಿ ನಿಲ್ಲುವಂತೆ, ಸಿದ್ಧಗಂಗಾ ಕ್ಷೇತ್ರ ಮಾಡಿತು. ನಾನು ದಲಿತನೆಂಬ ಭಾವವನ್ನು ಓಡಿಸಿತು. ಅವರ ಮಾತುಗಳು ನನ್ನಲ್ಲಿ ಸಮಭಾವ ವನ್ನು ತುಂಬಿದವು. ಇಂಥ ನೆಲೆಯನ್ನು ನನ್ನಂಥ ನೂರಾರು, ಸಾಹಸ್ರಾರು ದಲಿತರ ಅಭ್ಯುದಯಕ್ಕೆ ಪೂಜ್ಯ ಶ್ರೀಗಳು ಕಾರಣರಾಗಿದ್ದಾರೆಂದರೆ ಅತಿಶಯೋಕ್ತಿಯೇನೂ ಅಲ್ಲ ! ಶ್ರೀ ಸಿದ್ಧಗಂಗಾ ಮಠಕ್ಕೆ ನಾನು ಒಂದು ಪಕ್ಷ ಹೋಗದೆ ಇದ್ದಿದ್ದರೆ ನಾನು ಸಂಸ್ಕೃತ ಕಲಿಯುತ್ತಿದ್ದೆನೆ ? ಕಾವ್ಯ, ಶಾಸ್ತ್ರ ಆಧ್ಯಾತ್ಮಿಕಾನು ಭವ ಮತ್ತು ಉಪನಿಷತ್ತುಗಳ ಅನುಸಂಧಾನಕ್ಕೆ ಅವಕಾಶ ವಾಗುತ್ತಿತ್ತೆ ? ಈ ಪ್ರಶ್ನೆ ನನ್ನ ಸ್ಮೃತಿ ಚಿತ್ರಗಳ ಧ್ಯಾನಕ್ಕೆ ಪರೋಕ್ಷ ಕಾರಣವಾಗಿದೆ !

- ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್

ನಿತ್ಯ ಬೆಳಗುವ ಸೂರ್ಯನಂತೆ ಲೋಕ ಕಲ್ಯಾಣ ಕಾರ್ಯಗಳನ್ನು ಮಾಡಿಯೂ ಮಾಡದಂತಿರುವ ಶ್ರೀ ಸ್ವಾಮಿಗಳವರ ಪರಿಯು ಅಚ್ಚರಿಕರ. ಕಲ್ಯಾಣ ಕ್ರಾಂತಿಯ ನಂತರ ಪ್ರಭುದೇವರ ಆಧ್ಯಾತ್ಮ, ಬಸವಣ್ಣನವರ ದಾಸೋಹ, ಚೆನ್ನಬಸವಣ್ಣನವರ ಜ್ಞಾನ, ಶಿವಶರಣರ ಕಾಯಕಗಳಿಗೆ ಶ್ರೀ ಸ್ವಾಮಿಗಳವರು ಅಪೂರ್ವ ಸಂಗಮ. ಇಂದು ಕಲಾಧರನ ಮುಡಿಗೆ ಕಳೆ ತರಲರ್ಹವಾದ ಈ ದೇವಕುಸುಮ ಕರ್ನಾಟಕದಲ್ಲಿ ಬೆಳಗಿದುದು ಕನ್ನಡಿಗರ ಪುಣ್ಯ.

- ಜಗದ್ಗುರು ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು

ವಚನಕಾರರನ್ನು ನೆನಪು ಮಾಡುವ, ಎಲ್ಲ ಜಾತಿಯ ಸಾವಿರಾರು ವಿದ್ಯಾರ್ಥಿಗಳಿಗೆ ಅನ್ನದಾನವನ್ನು ವಿದ್ಯಾದಾನವನ್ನು ಮಾಡುತ್ತಿರುವ ಸಿದ್ಧಗಂಗೆಯ ಸ್ವಾಮಿಗಳು ಕರ್ನಾಟಕದ ಎಲ್ಲ ಮಠಾಧೀಶರಿಗೂ ಇವರು ಆದರ್ಶಪ್ರಾಯರು.

- ಡಾ. ಯು.ಆರ್. ಅನಂತಮೂರ್ತಿ
೬೯ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರು







# ಆತ್ಮ

– ಕವಿತಾಕೃಷ್ಣ
ಸಾಹಿತಿಗಳು, ಕ್ಯಾತ್ಸಂದ್ರ

'ಆತ್ಮ'ವು ಪ್ರತಿ ಜೀವಿಯಲ್ಲೂ ಇದೆ. ಇದು ಸುಖಿ-ದುಃಖಿ, ಪತಿತ-ಪಾವನ, ರೂಪಿ-ಕುರೂಪಿ ಹೀಗೆ ಎಲ್ಲರಲ್ಲಿಯೂ ಇದೆ. ಇದು ಸ್ವಯಂ ಜ್ಯೋತಿ ಎಂದು ನಮ್ಮ ಋಷಿಕುಲ ಸಂತಾನ ಘೋಷಿಸಿದೆ. ಇದು ದೇಹವಾಸಿ. ದೇಹಕ್ಕೆ ಅಷ್ಟೇ ಸಾವು. ಆತ್ಮಕ್ಕೆ ಎಂದೂ ಸಾವಿಲ್ಲ. ಅದು ಅಮೃತ ಸ್ವರೂಪವಾದುದು.

ದಾಸವರೇಣ್ಯರಾದ ಕನಕದಾಸರು ಜೀವ ಯಾವ ಕುಲ? ಆತ್ಮ ಯಾವ ಕುಲ? ಎಂದು ಪ್ರಶ್ನಿಸಿದ್ದಾರೆ. ಅವರು ಆತ್ಮಕ್ಕೆ ಕುಲುಗೋತ್ರಗಳಿಲ್ಲ ಎಂದು ಹೇಳಿ, ಅದಕ್ಕೆ ಆಶ್ರಯವಾಗಿರುವ ಜೀವಕ್ಕೂ ಸಹ ಕುಲಗೋತ್ರಾದಿಗಳಿಲ್ಲ ಎಂದು ಹೇಳಿದ್ದಾರೆ.

ಪ್ರಾಚೀನ ಕಾಲದಿಂದಲೂ ಆತ್ಮದ ಬಗ್ಗೆ ವೇದಗಳು, ಉಪನಿಷತ್‌ಗಳು, ಪುರಾಣಗಳು, ಮಹಾನ್ ಕಾವ್ಯಗಳು ಚಿಂತನ ನಡೆಸಿವೆ. ಒಟ್ಟಾರೆ ಒಂದೇ ಅಭಿಪ್ರಾಯವನ್ನೇ ಪ್ರಕಟಗೊಳಿಸಿವೆ.

'ಪರಮ ಪುರುಷನೇ ಆತ್ಮ' ಎಂದು ಕಠಕೋಪನಿಷತ್ ಹೇಳಿದರೆ, 'ಯಾವುದರಿಂದ ಸಮಸ್ತ ಪ್ರಾಣಿಗಳು ಅವತರಿಸಿ, ಬಾಳಿ ಬದುಕಿ, ಯಾವುದರಲ್ಲಿ ಲಯ ಹೊಂದುವುದೋ ಅದೇ ಸತ್ಯ. ಅದೇ ಬ್ರಹ್ಮ. ಅದೇ ಆತ್ಮ' ಎಂದು ಶೇತಾಶ್ವತರ ಉಪನಿಷತ್ ಹೇಳಿ ಶರೀರವಾಸಿಯಾದ ಆತ್ಮವನ್ನು ತಪಸ್ಸಿನಿಂದ ಕಾಣಬಹುದು ಎಂದು ಮಾರ್ಗದರ್ಶನ ಮಾಡಿದೆ.

ಆತ್ಮದ ಸ್ತರವನ್ನು ಭಗವದ್ಗೀತೆಯು ಗುರುತಿಸಲು ಯತ್ನಿಸಿದೆ. ಇಂದ್ರಿಯಗಳಿಗಿಂತ ಮನಸ್ಸು, ಮನಸ್ಸಿಗಿಂತ ಬುದ್ಧಿ, ಬುದ್ದಿಗಿಂತ ಆತ್ಮ ಅತ್ಯಂತ ದೊಡ್ಡದೆಂದು ಹೇಳಿದೆ. ಪಂಚೇಂದ್ರಿಯಗಳು, ಮನ, ಬುದ್ಧಿಗಳಿಗಿಂತ ಆತ್ಮದ ಸ್ಥಾನ ಉನ್ನತವಾದುದು. ಈ ಆತ್ಮನ ಹಿರಿಮೆ ಗರಿಮೆಗಳನ್ನು ಅರಿತು, ವ್ಯಕ್ತಿಯು ಆತ್ಮನಿಷ್ಠನಾಗಿ ಬಾಳಿದರೆ ಏನೆಲ್ಲವನ್ನು ಜಯಿಸಬಹುದು ಎಂದು ದಾರಿದೀಪ ಹಚ್ಚುತ್ತದೆ.

ದ್ರಷ್ಟಾರರಾದ ಶ್ರೀ ರಾಮಕೃಷ್ಣ ಪರಮಹಂಸರು ''ನಿನ್ನನ್ನು ನೀನು ಮೊದಲು ತಿಳಿ; ಆ ನಂತರ ದೇವರನ್ನು ನೀನೇ ತಿಳಿಯುವೆ' ಎಂದು ಹೇಳಿದ್ದಾರೆ. ಬಹು ಮಂದಿ ಮೊದಲು ತಮ್ಮನ್ನು ತಾವು ಅರಿಯುವ ಕಾರ್ಯಮಾಡದೆ, ಒಂದೇ ಬಾರಿಗೆ ದೇವರನ್ನು ಅರಿಯುವ ಕೆಲಸ ಮಾಡಲು ಹೋಗಿ ಸೋಲನ್ನುಂಡಿದ್ದಾರೆ. ಅವರು ಮುಂದುವರೆದು 'ನೀನು ಈರುಳ್ಳಿ ಸಿಪ್ಪೆಯನ್ನು ಹೆಚ್ಚು ಬಿಡಿಸಿದಂತೆಲ್ಲಾ, ಹೆಚ್ಚು ಸಿಪ್ಪೆಯನ್ನೇ ಕಾಣುವೆ. ತಿರುಳು ಎಂಬುದು ಕಾಣುವುದೇ ಇಲ್ಲ. ನೀನು ಇದೇ ಕ್ರಮದಲ್ಲಿ ಅಹಂಕಾರ ಬಿಡಿಸುತ್ತಾ ಹೋದರೆ ಅದು ಶೂನ್ಯದಲ್ಲಿ ಲಯವಾಗುವುದು, ಕೊನೆಗೆ ಏನು ಉಳಿವುದೋ ಅದೇ ಶುದ್ಧ ಆತ್ಮ'' ಎಂದಿದ್ದಾರೆ. ಅವರ ಒಟ್ಟಾರೆ ಅಭಿಪ್ರಾಯ ಏನೆಂದರೆ ''ಜೀವಿಗಳ ಅಹಂಕಾರ ಪೂರ್ಣವಾಗಿ ಲಯವಾದಾಗ ದೇವರು ಕಾಣುವನು'' ಎಂಬುದೇ ಆಗಿದೆ.

'ಆತ್ಮ'ದ ಬಗ್ಗೆ ನಮ್ಮ ತತ್ವ ಸಿದ್ಧಾಂತಗಳಲ್ಲಿ ಏಕತೆ ಇಲ್ಲ. ಎಂಬುದು ನಿಜ. ಆದಾಗ್ಯೂ ಆತ್ಮದ ಮಹಿಮೆ, ಶಕ್ತಿ, ಪಾವಿತ್ರ್ಯಗಳ ಬಗ್ಗೆ ಏಕತೆ ಇದೆ ಎನ್ನಬಹುದು. ವಿಶಿಷ್ಠಾದ್ವೈತ ಸಿದ್ಧಾಂತದ ಆಚಾರ್ಯ ರಾಮಾನುಜರು 'ಆತ್ಮ ಸಂಕೋಚ ವಿಕಾಸ ವಾಗುತ್ತಿದೆ' ಎನ್ನುವರು. ಅದ್ವೈತ ಸಿದ್ಧಾಂತದ ಆಚಾರ್ಯ ಶಂಕರ ಭಗವತ್ಪಾದರು 'ಆತ್ಮ ಭ್ರಾಂತಿಗೆ ಒಳಗಾಗಿದೆ' ಎನ್ನುವರು. ಈ ಬಗ್ಗೆ ಸ್ವಾಮಿ ವಿವೇಕಾನಂದರು ಚಿಂತನೆ ಮಾಡಿ ಎಲ್ಲಾ ಆಚಾರ್ಯರು 'ಆತ್ಮನಲ್ಲಿ ಶಕ್ತಿ ಇದೆ' ಎಂದು ಒಪ್ಪುವರು. ಅದು ಇಂದು ಅವ್ಯಕ್ತವಾಗಿದ್ದು ನಾಳೇ ವ್ಯಕ್ತವಾಗಿ ಬಿಡಬಹುದು ಎಂದು ಹೇಳಿದ್ದಾರೆ.

ಪಾಶ್ಚಾತ್ಯರಲ್ಲೂ ಆತ್ಮ ಚಿಂತನೆ ನಡೆದಿದೆ. ತತ್ವಜ್ಞಾನಿ ಸಾಕ್ರಟೀಸ್ 'ಆತ್ಮ ಅಮರ' ಎನ್ನುತ್ತಾನೆ. ''ಮಾನವ ತನ್ನ ಅಂತರಂಗದಲ್ಲಿ ದೇಗುಲ ನಿರ್ಮಿಸಿ ಸರ್ವಾಂತರ್ಯಾಮಿ ಆತ್ಮನ ರೂಪುರೇಷೆ ಕಲ್ಪಿಸಬೇಕು. ಆತ್ಮಜ್ಞಾನ ಲಭಿಸಿದಾಗ ಮಾನವ ಎಲ್ಲಾ ಭೇದ ನೀಗಿ ಮಹಾಮಾನವನಾಗುವ'' ಎಂದು ಲೆಕೊಂಪ್ಪಡುನಾಯ್ ಹೇಳಿದ್ದಾನೆ.

ಆತ್ಮಗೌರವ ಹೊಂದಿರಲೇಬೇಕು. ''ವ್ಯಕ್ತಿಯಿಂದ ಸಮಾಜ ದೆಡೆಗೆ, ಸಮಾಜದಿಂದ ವಿಶ್ವದೆಡೆಗೆ, ವಿಶ್ವದಿಂದ ಅನಂತತೆಯೆಡೆಗೆ ಸಾಗುವುದೇ ಆತ್ಮದ ಯಥಾವತ್ತಾದ ಮುನ್ನಡೆ'' ಎಂದು ವಿಶ್ವಕವಿ ರವೀಂದ್ರರು ಹೇಳುತ್ತಾರೆ. 'ಆತ್ಮಲಾಭಕ್ಕಿಂತ ಅಧಿಕತರ ಲಾಭ ಬೇರೊಂದಿಲ್ಲ' ಎಂದು ಭಾಗವತ ಹೇಳುತ್ತದೆ.

ಆತ್ಮ ಹೊಂದಿರುವ ನಾವು ಆತ್ಮಾವಲೋಕನ ಮಾಡೋಣ. ಆತ್ಮ ವಿಕಾಸಕ್ಕಾಗಿ ಚಿಂತಿಸೋಣ. ನಾವೇ ಆತ್ಮಶಿಲ್ಪಿಗಳಾಗಿ ಆತ್ಮ ವಿಶ್ವಾಸದಿಂದ ದುಡಿಯೋಣ. ಆತ್ಮಸಾಕ್ಷಿಯಾಗಿ ಬದುಕೋಣ. ಋಷಿಜೀವನದ ಬೆಳಕಲ್ಲಿ ಲೌಕಿಕ ಕೃಷಿಯೊಂದಿಗೆ ಆತ್ಮಕೃಷಿಯನ್ನು ಹಸನಾಗಿ ಮಾಡಿ, ಆತ್ಮೋದ್ಧಾರ ಮಾಡಿಕೊಳ್ಳೋಣ. ನಮ್ಮನ್ನು ನಾವೇ ಉದ್ಧಾರ ಮಾಡಿಕೊಳ್ಳೋಣ.

❀

# "ಎಲೆ ಮರೆಯ ಹೂವು"



ಲಿಂ. ಕೆ. ವೀರಭದ್ರಯ್ಯನವರು

ಸರಳತೆ, ಸಜ್ಜನಿಕೆ, ವಿಯನ ವಂತಿಕೆ, ಸಹೃದಯತೆ, ಶಿಸ್ತು, ಸಮಯ ಪರಿಪಾಲನೆ, ಇವೆಲ್ಲದರ ಮೊತ್ತ ವಾಗಿದ್ದವರು ಶ್ರೀ ಕೆ. ವೀರಭದ್ರಯ್ಯ ನವರು, ಉತ್ತಮ ಅಧ್ಯಾಪಕ ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದ, ವಿದ್ಯಾರ್ಥಿ ಗಳು ಹಾಗೂ ಅಧ್ಯಾಪಕರಿಗೆ 'ಕೆ.ವಿ' ಎಂದೇ ಪ್ರೀತಿ ಪಾತ್ರರಾಗಿದ್ದ ಶ್ರೀ ವೀರಭದ್ರಯ್ಯನವರು ಅಕ್ಟೋಬರ್ ೫, ೨೦೦೭ ರಂದು ತಾವು ಸೇವೆ ಸಲ್ಲಿಸುತ್ತಿದ್ದ ತುಮಕೂರಿನ ಶ್ರೀ ಸಿದ್ಧಗಂಗಾ ಪದವಿಪೂರ್ವ ಕಾಲೇಜಿನ ಆವರಣದಲ್ಲಿ ಹೃದಯಘಾತದಿಂದ ನಿಧಾನರಾದರು. ''ಜವರಾಯ ಬಂದರೆ ಬರಿಗೈಲಿ ಬರಲಿಲ್ಲ, ಒಳ್ಳೊಳ್ಳೆ ಮರನ ಕಡಿ ಬಂದ'' ಎಂಬ ಜನಪದ ಸಾಲುಗಳು ಶ್ರೀ ವೀರಭದ್ರಯ್ಯನವರ ಪಾಲಿಗೆ ಅದೆಷ್ಟು ಸತ್ಯ ಎನಿಸುತ್ತದೆ!

ಶ್ರೀ ಕೆ. ವೀರಭದ್ರಯ್ಯನವರು ತುಮಕೂರು ತಾಲ್ಲೂಕು ಊರ್ಡಿಗೆರೆ ಹೋಬಳಿ ಕಾಳೇನಹಳ್ಳಿಯಲ್ಲಿ ನಿವೃತ್ತ ಶಾಲಾ ಅಧ್ಯಾಪಕರಾದ ಶ್ರೀ ಎಂ. ಸಾವಂದಯ್ಯನವರ ಮಗ ಶ್ರೀ ಎಸ್. ರುದ್ರಯ್ಯ ಮತ್ತು ಶ್ರೀಮತಿ ಶಿವರುದ್ರಮ್ಮನವರ ಹಿರಿಯ ಮಗನಾಗಿ ದಿನಾಂಕ ೧೧-೦೨-೧೯೪೪ ರಲ್ಲಿ ಜನಿಸಿದರು. ಕಾಳೇನಹಳ್ಳಿಯಲ್ಲಿ ಪ್ರಾಥಮಿಕ ಶಾಲಾಭ್ಯಾಸ ಮುಗಿಸಿ ಶ್ರೀ ಸಿದ್ಧಗಂಗಾ ಮಠಕ್ಕೆ ಪ್ರೌಢ ವಿದ್ಯಾಭ್ಯಾಸಕ್ಕಾಗಿ ಬಂದರು. ಕಾಲೇಜಿನ ವ್ಯಾಸಂಗವನ್ನು ತುಮಕೂರಿನ ಸರ್ಕಾರಿ ಕಾಲೇಜಿನಲ್ಲಿ ಮಾಡಿ ಬಿ.ಎಸ್ಸಿ ಪದವಿ ಪಡೆದು ಅನಂತರ ಬಿ.ಎಡ್ ಪಡೆದು ಪರಮ ಪೂಜ್ಯ ಶ್ರೀ ಶ್ರೀಗಳವರ ಆಶೀರ್ವಾದದ ಆದೇಶದಂತೆ ಪುರುಷನಹಳ್ಳಿ ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆಯಲ್ಲಿ ಶಿಕ್ಷಕರಾಗಿ ಸೇವಾ ವೃತ್ತಿಯನ್ನು ಕೈಕೊಂಡರು. ಅನಂತರದ ದಿನಗಳಲ್ಲಿ ಶ್ರೀ ಸಿದ್ಧಗಂಗಾ ಮಠ ಹಾಗೂ ತುಮಕೂರುಗಳಲ್ಲಿನ ಹೈಸ್ಕೂಲ್, ಸಿದ್ಧಗಂಗಾ ಪದವಿ ಪೂರ್ವ ಕಾಲೇಜುಗಳಲ್ಲಿ ಸಹ ಶಿಕ್ಷಕರಾಗಿ ೧೪-೧೦-೧೯೯೯ ರಿಂದ ತುಮಕೂರಿನ ಶ್ರೀ ಸಿದ್ಧಗಂಗಾ ಸಂಯುಕ್ತ ಪದವಿ ಪೂರ್ವ ಕಾಲೇಜಿನ ಉಪ ಪ್ರಾಂಶುಪಾಲರಾಗಿ ನೇಮಕ ಗೊಂಡು ಸೇವೆ ಸಲ್ಲಿಸಿದರು.

೧೯೮೮ ರಿಂದ ಹಳೇ ವಿದ್ಯಾರ್ಥಿ ಸಂಘ ಮತ್ತು ಕೃಷಿ ಹಾಗೂ ಕೈಗಾರಿಕಾ ವಸ್ತು ಪ್ರದರ್ಶನದ ಜಂಟಿ ಕಾರ್ಯದರ್ಶಿಯಾಗಿ ಸದ್ದುಗದ್ದಲ ವಿರದ ಸಮ್ಮಾನ ಸಂಭಾವಿತ ಸಕ್ರಿಯ ಸೇವಾವ್ರತ ಶೀಲರಾಗಿದ್ದ ಶ್ರೀ ಕೆ. ವೀರಭದ್ರಯ್ಯನವರು ಮಿತ ಭಾಷಿಗಳು, ಸ್ನೇಹಪರರು, ಕರ್ತವ್ಯ ಮುಖಿಗಳು, ಎಲೆಮರೆಯ ಹೂವಾಗಿದ್ದರು.

ಶ್ರೀಯುತರು ತಾಯಿ ಶ್ರೀಮತಿ ಶಿವರುದ್ರಮ್ಮ, ಪತ್ನಿ ಶ್ರೀಮತಿ ನಾಗರತ್ನ, ಪುತ್ರರಾದ ಚಿ|| ಕೆ.ವಿ. ದೇವರಾಜು, ಚಿ|| ಕೆ.ವಿ. ವಿಜಯಕುಮಾರ್ ಮತ್ತು ಪುತ್ರಿ ಕು|| ಮಮತ ಅವರನ್ನು, ಅಪಾರ ಬಂಧು ಮಿತ್ರರನ್ನು, ಅಭಿಮಾನಿಗಳನ್ನು ಅಗಲಿದ್ದಾರೆ. ಶ್ರೀಯುತರ ಅಗಲಿಕೆಯಿಂದ ಶ್ರೀಮಠ ಒಬ್ಬ ನಿಷ್ಠಾವಂತ ಸೇವಾ ವ್ರತಿಯನ್ನೂ ಕಳೆದು ಕೊಂಡಂತಾಗಿದೆ.

ಲಿಂಗೈಕ್ಯ ಶ್ರೀ ಕೆ. ವೀರಭದ್ರಯ್ಯನವರ ಆತ್ಮಕ್ಕೆ 'ಸಿದ್ಧಗಂಗಾ' ಗೌರವಾದರ. ಕಂಬನಿಯನ್ನು ಅರ್ಪಿಸುತ್ತಾ, ಕುಟುಂಬ ವರ್ಗದವರಿಗೆ ಅಗಲಿಕೆಯ ನೋವನ್ನು ಸಹಿಸುವಂತೆ ಶ್ರೀ ಸಿದ್ಧಗಂಗಾ ಗುರು ಪರಂಪರೆ ಶಕ್ತಿಯನ್ನೀಯಲಿ ಎಂದು ಪ್ರಾರ್ಥಿಸುತ್ತದೆ. □





# ನೆನಪಿನ ದೀಪವಾದರು



ಲಿಂ. ವಿದ್ವಾನ್ ಬಿ. ಗಂಗಪ್ಪನವರು

ಅವರು 'ಶಾಸ್ತ್ರಿ'ಗಳೆಂದೆ ಚಿರಪರಿಚಿತ ರಾದವರು. ದಾಸೇನಹಳ್ಳಿಯ ಬಾಳಪ್ಪ ಗಂಗಮ್ಮನವರ ಮುದ್ದಿನ ಮಗು. ಶ್ರೀಮಠ ಸಿದ್ಧಗಂಗಾದ ಸೇವಾ ಪ್ರಣತಿ ಮುಟ್ಟಿ ತಾವೊಂದು ದೀಪವಾದವರು. ೨೪-೪-೧೯೧೬ ರಲ್ಲಿ ಇಹದ ಬೆಳಕು ಕಂಡವರು. ಶಿವಯೋಗಿ ಪೂಜ್ಯ ಶ್ರೀ ಉದ್ದಾನಸ್ವಾಮಿಗಳ ಕಮ್ಮಟದಲ್ಲಿ ರೂಪಿತ ವಾದವರು. ಶಾಸ್ತ್ರಿಗಳು ಶ್ರೀ ಉದ್ದಾನಪ್ಪ ನವರ ನೆಚ್ಚಿನ ಶಿಷ್ಯರಾದರು. ಪೂಜ್ಯರ ಆಶೀರ್ವಾದದಲ್ಲಿ ಅರಳಿದರು. ಮಠದ ಸೇವೆಗೆ ಮುಡಿಪಾದರು. ಪ್ರಾಥಮಿಕ ವಿದ್ಯಾಭ್ಯಾಸ ಕ್ಯಾತ್ಸಂದ್ರದಲ್ಲಿ. ಪ್ರೌಢ ಶಾಲಾಭ್ಯಾಸ ತುಮಕೂರಿನಲ್ಲಿ. ಅದೂ ಪೂರ್ಣವಾಗಲಿಲ್ಲ. ಸಂಸ್ಕೃತಾಭ್ಯಾಸ ಮುಂದುವರಿಯಿತು. ಅಮರಕೋಶದ ಕಂಠಪಾಠದಲ್ಲಿ ಗುರುಪರೀಕ್ಷೆ. ಹಾವುಗೆಯ ಏಟಿನ ಶಿಕ್ಷೆ. ಆದರೂ ಗುರುಗಳಲ್ಲಿ ಶ್ರದ್ಧೆಯಳಿಯದ ನಿಷ್ಠೆ. ಮಿತ್ರರ ಬಳಗ ಶುದ್ಧ ಅಪರಂಜಿ. ದೇಗುಲಮಠದ ಪೂಜ್ಯ ಲಿಂ|| ಮಹಾಲಿಂಗಸ್ವಾಮಿಗಳು, ಪೂಜ್ಯ ಲಿಂ|| ಮರುಳಾರಾಧ್ಯರು, ಬೆಟ್ಟದ ಮೇಲಿನ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಗೆ ಹೂ ಪತ್ರೆ ಬಿಡಿಸಿ ತಂದು ಕೊಡುವ ನಿಯಮ ಪಾಲನೆ. ಪೂಜ್ಯಶ್ರೀ ಮರುಳಾರಾಧ್ಯರ ಲಿಂಗೈಕ್ಯ ವಾರ್ತೆಯನ್ನು ದೊಡ್ಡಗುರುಗಳಿಗೆ ಬಿನ್ನವಿಸಿದ ಸಂದರ್ಭ. 'ಶಿವಣ್ಣ'ನಿದ್ದಾನೆ ಎಂಬ ದೊಡ್ಡ ಶ್ರೀಗಳ ನಿರಾಳದ ನುಡಿಗೆ ತನ್ಮಯತೆಯ ಧನ್ಯಭಾವ ತುಂಬಿದ ತುಂಬು ಹೃದಯದ ಶಿಷ್ಯ.

ಸಂಸ್ಕೃತ ಕಾಲೇಜಿನಲ್ಲಿ ಅಧ್ಯಾಪಕ ಜೊತೆಗೆ ಮಠದ ಸೇವಾ ಕಾರ್ಯ ತತ್ಪರತೆ. ಚಾಚೂ ತಪ್ಪದೆ ಕರ್ತವ್ಯಪಾಲನೆ. ಮಠವೇ ಉಸಿರು, ಉಸಿರೇ ಮಠವೆಂಬ ಸೇವಾವ್ರತ. ಸಾಹಿತ್ಯಸೇವೆಯೂ ಮಧ್ಯೆ ಮಧ್ಯೆ. 'ಕಿರಣ', 'ಸಿದ್ಧಗಂಗಾ', ಪ್ರತಿಕೆಗಳಲ್ಲಿ ವಿಚಾರಪೂರ್ಣ ಲೇಖನಗಳು.

ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಅಂತರಂಗದ ಶಿಷ್ಯ. ಸೇವೆಗೆ ಸದಾ ಅಭಿಮುಖಿ. ಆಡು ಮುಟ್ಟದ ಸೊಪ್ಪಿಲ್ಲವೆಂಬಂತೆ ಶ್ರೀಮಠದ ಸೇವಾ ಕಾರ್ಯಗಳೆಲ್ಲವುಗಳಲ್ಲಿ ಸಕ್ರಿಯ ಪಾತ್ರ. ಉಗ್ರಾಣ, ಆಫೀಸು, ಹಳೇಮಠ, ಸಂಸ್ಕೃತ ಕಾಲೇಜು, ಜಾತ್ರೆ, ಸಭೆ, ಸಮಾರಂಭಗಳೆಲ್ಲವುಗಳಲ್ಲಿ ಸೇವೆಗೆ ಸನ್ನದ್ಧ.

ವಿದ್ಯಾರ್ಥಿಗಳ ಬಗ್ಗೆ ಗುಪ್ತ ಪ್ರೀತಿ. ಹೊರಗೆ ನಿಷ್ಠುರುದ ನುಡಿ. ಒಳಗೆ ಬೆಳೆಸಬೇಕೆಂಬ ಕಳಕಳಿ. ಪೂಜ್ಯರಲ್ಲಿ ಅರಿಕೆ, ಸಹಾಯ, ಆಶೀರ್ವಾದಕ್ಕಾಗಿ ಕೈಹಿಡಿದು ನಡೆಸಿದರು. ಬಳಿಗೆ ಬಂದವರನ್ನು. ಅರಿತು ನಡೆದುಕೊಂಡವರನ್ನು ಅಂಥವರಿಗೆ ಗುರು ವಾದರು, ಸ್ನೇಹಿತರಾದರು, ಮಾರ್ಗ ದರ್ಶಕ ರಾದರು. ಸ್ಮರಣೀಯರಾದರು.

ಶಾಸ್ತ್ರಿಗಳ ಸೇವಾ ನಿಷ್ಠೆಯನ್ನು, ವಿದ್ವತ್ತನ್ನು, ಗುರುಲಿಂಗ ಜಂಗಮ ಪ್ರೇಮವನ್ನು ಗುರುತಿಸಿ ಪ್ರಶಸ್ತಿಗಳು ಬಂದವು. ೧೯೬೪ ರಲ್ಲಿ ಚಿತ್ರದುರ್ಗದ ಜಗದ್ಗುರು ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಸ್ವಾಮಿಗಳವರ ಪೀಠಾರೋಹಣ ಸಂದರ್ಭದಲ್ಲಿ 'ಸಾಹಿತ್ಯ ವಿಭೂಷಣ' ಪ್ರಶಸ್ತಿ ಪುರಸ್ಕೃತ. ೧೯೭೫ ಹಾಗೂ ೧೯೮೨ರಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ರಜತ ಹಾಗೂ ಸುವರ್ಣ ಮಹೋತ್ಸವಗಳಲ್ಲಿ ಸನ್ಮಾನ, ೧೯೮೩ರಲ್ಲಿ ಕರ್ನಾಟಕ ರಾಜ್ಯ ಸರ್ಕಾರದಿಂದ ರಾಜ್ಯ ಪ್ರಶಸ್ತಿ ಅಲಂಕೃತ.

'ಶಾಸ್ತ್ರಿ'ಗಳ ಸರಳ ಜೀವನದ ಜೀವದ್ರವ್ಯ ಧರ್ಮ ಪತ್ನಿಯವರಾದ ಶ್ರೀಮತಿ ರೇವಮ್ಮನವರು ಮಾತೃ ವಾತ್ಸಲ್ಯಕ್ಕೆ ಇನ್ನೊಂದು ಹೆಸರು. ಪತಿಯ ಎಲ್ಲ ಅನಿಸಿಕೆಗಳಿಗೆ, ಆಲೋಚನೆಗಳಿಗೆ ತಂಗು ದಾಣವಾದವರು. ಮುಗ್ಧ ಮುದ್ದು ಮಗ ಶ್ರೀ ಸ್ವಾಮಿಯನ್ನು ಹೆತ್ತು ಶಾಸ್ತ್ರಿಗಳವರ ವಂಶ ವಾಹಿನಿಯನ್ನು ಮುನ್ನಡೆಸಿದ ಗೃಹ ತಪಸ್ವಿನಿ. ಮುತ್ತಿನಂಥ ಅಳಿಯಂದಿರನ್ನು ಶ್ರೀ ಸಿ.ಎಸ್. ಸಿದ್ಧಲಿಂಗಯ್ಯ, ವಿದ್ವಾನ್ ಶ್ರೀ ಕೆ. ಬಸವರಾಜು ಅವರನ್ನು ಕಣ್ಣನ್ನು ರೆಪ್ಪೆ ನೋಡಿಕೊಳ್ಳುವಂತೆ ನೋಡಿಕೊಂಡ ಸುಂದರ ಸಂಸಾರ. ಮಕ್ಕಳು, ಮೊಮ್ಮಕ್ಕಳು, ಶಿಷ್ಯರು, ಅಭಿಮಾನಿಗಳ, ಬಂಧುಬಳಗ ಎಲ್ಲರಿಗೆ ನೆನಪಾಗಿ ಹೋದರು ವಿದ್ವಾನ್ ಶ್ರೀ ಬಿ. ಗಂಗಪ್ಪನವರು ದಿನಾಂಕ ೧-೧೦-೨೦೦೭ ರಂದು, ಎಂಬತ್ತಾರು ವರ್ಷಗಳ ದೀರ್ಘ ಬದುಕು. ಶಾಸ್ತ್ರಿಗಳ ಅಗಲಿಕೆ ಶ್ರೀಮಠಕ್ಕೆ ಅಪಾರ ನಷ್ಟವೆಂದೇ ಭಾವಿಸಿ 'ಸಿದ್ಧಗಂಗಾ' ಶ್ರದ್ಧಾಂಜಲಿಯನ್ನರ್ಪಿಸುತ್ತದೆ. ಲಿಂಗದೊಳಗಾದ ಶಾಸ್ತ್ರಿಗಳ ಆತ್ಮಕ್ಕೆ ಗೌರವಾದರಗಳನ್ನು ಸಲ್ಲಿಸುತ್ತದೆ.

ಲಿಂಗೈಕ್ಯರ ಕುಟುಂಬ ವರ್ಗದವರಿಗೆ ಶ್ರೀಯುತರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಶ್ರೀ ಸಿದ್ಧಗಂಗಾ ಗುರು ಪರಂಪರೆ ದಯಪಾಲಿಸಲಿ ಎಂದು ಪ್ರಾರ್ಥಿಸುತ್ತದೆ. □



# ವಿಶ್ವಪ್ರಸಿದ್ಧ ಜಲಪಾತ : ನಯಾಗರಾ

– ಬಿ.ನಂ. ಚನ್ನಪ್ಪ
ನಿವೃತ್ತ ಮುಖ್ಯ ಇಂಜನಿಯರ್,
ನಂ. ೧೧೧೫, ೧೧ನೇ ಮುಖ್ಯರಸ್ತೆ,
ಪಶ್ಚಿಮಕಾರ್ಡ್ ರಸ್ತೆ, ೨ನೇ ಹಂತ,
ಬೆಂಗಳೂರು – ೫೬೦ ೦೮೬.

'ಕೋಶ ಓದಿ ನೋಡು, ದೇಶ ತಿರುಗಿ ನೋಡು' ಎಂಬುದು ಜನಪ್ರಿಯ ಗಾದೆ. ಕೋಶ ಓದುವುದರಿಂದ ಪುಸ್ತಕ ಜ್ಞಾನ. ದೇಶ ತಿರುಗುವುದರಿಂದ ಪ್ರತ್ಯಕ್ಷ ಜ್ಞಾನ. ಪುಸ್ತಕ ಜ್ಞಾನ ಅರಿವಾದರೆ, ಪ್ರತ್ಯಕ್ಷ ಜ್ಞಾನ ಅನುಭವ. ಇವೆರಡೂ ಬದುಕಿಗೆ ಒಂದಕ್ಕೊಂದು ಪೂರಕ. ಪ್ರವಾಸ ಒಂದು ರೀತಿಯಲ್ಲಿ ಶಿಕ್ಷಣವಿದ್ದಂತೆ. ಮಾನವೀಯ ಮೌಲ್ಯಗಳು ಮೈಗೊಡಬೇಕಾದರೆ ಪ್ರವಾಸ ಮಾಡಬೇಕು. ಪ್ರವಾಸದಿಂದ ನಮ್ಮ ದೃಷ್ಟಿ ವಿಶಾಲವಾಗುತ್ತದೆ; ಜ್ಞಾನ ಹೆಚ್ಚಾಗುತ್ತದೆ; ಅನುಭವವಾಗುತ್ತದೆ. ಪ್ರವಾಸಕ್ಕೆ ಮಾಡಿದ ವೆಚ್ಚ ನಮ್ಮ ಬದುಕಿಗೆ ಹೂಡಿದ ಬಂಡವಾಳ ! ಪ್ರವಾಸ ಮಾಡುವ ಅವಕಾಶ ಎಲ್ಲರಿಗೂ ದೊರೆಯುವುದಿಲ್ಲ. ಕೆಲವರು ಪ್ರವಾಸದ ಅನುಭವವನ್ನು ತಾವೊಬ್ಬರೇ ಅನುಭವಿಸಿದರೆ, ಮತ್ತೆ ಕೆಲವರು ಸಾಹಿತ್ಯದ ಮೂಲಕ ಬೇರೆಯವರಿಗೂ ಹಂಚುತ್ತಾರೆ. ಎರಡನೆಯ ಗುಂಪಿಗೆ ಸೇರಿದವರು ಶ್ರೀ ಬಿ.ನಂ. ಚನ್ನಪ್ಪನವರು. ಅವರು ಅಮೇರಿಕಾ ಸಂಸ್ಥಾನದಲ್ಲಿರುವ ವಿಶ್ವದ ಏಳು ಅದ್ಭುತಗಳಲ್ಲಿ ಒಂದಾದ ವಿಶ್ವಪ್ರಸಿದ್ಧ ನಯನ ಮನೋಹರ ಜಲಪಾತ ನಯಾಗರಾಕ್ಕೆ ಭೇಟಿನೀಡಿದಾಗ ಆದ ರಸಾನುಭವವನ್ನು ಹಾಗೂ ಜಲಪಾತದ ವಿವರವನ್ನು 'ಸಿದ್ಧಗಂಗಾ' ಪತ್ರಿಕೆಯ ಓದುಗರಿಗೆ ಸರಳವಾಗಿ, ಕಣ್ಣಿಗೆ ಕಟ್ಟುವಂತೆ ಪರಿಚಯಮಾಡಿಕೊಟ್ಟಿದ್ದಾರೆ. ಅವರ ಈ ಪ್ರವಾಸಾನುಭವವನ್ನು ಓದುವಾಗ ನಾವೇ ಜಲಪಾತವನ್ನು ನೋಡಿದ ಅನುಭವವಾಗುತ್ತದೆ.

ಅಮೇರಿಕ ಸಂಯುಕ್ತ ಸಂಸ್ಥಾನವು ಇಂದು ಪ್ರಪಂಚದಲ್ಲಿಯೇ ಅತ್ಯಂತ ಬಲಿಷ್ಠ ಹಾಗೂ ಪ್ರಗತಿ ಹೊಂದಿದ ರಾಷ್ಟ್ರ. ಅದು ಇಂದಿನ ಎಲ್ಲ ಜಾಗತಿಕ ಆಗು-ಹೋಗುಗಳನ್ನು ನಿಯಂತ್ರಿಸುತ್ತಿರುವ ರಾಷ್ಟ್ರ. ಕೇವಲ ೨೨೬ ವರ್ಷಗಳ ಇತಿಹಾಸವುಳ್ಳ ಈ ರಾಷ್ಟ್ರವು ಸಾಮಾಜಿಕ, ಶೈಕ್ಷಣಿಕ, ವೈಜ್ಞಾನಿಕ ಹಾಗೂ ರಾಜಕೀಯವಾಗಿ ಸಾಧಿಸಿರುವ ಪ್ರಗತಿ ಅದ್ಭುತವಾದುದು. ಅಮೇರಿಕ ದೇಶವನ್ನು ಅದರ ಸಾಧನೆಯನ್ನು ನೋಡಬೇಕೆಂಬುದು ನನ್ನ ಅನೇಕ ವರ್ಷಗಳ ಬಯಕೆಯಾಗಿತ್ತು. ಅದು ನನಸಾದುದು ೧೯೯೫ರಲ್ಲಿ. ನನ್ನ ಎರಡನೆಯ ಮಗ ಚಿ. ರವಿಶಂಕರ್, ಅಲ್ಲಿ ವೈದ್ಯನಾಗಿ ಕೆಲಸಮಾಡುತ್ತಿರುವುದರಿಂದ, ನನ್ನ ಪ್ರವಾಸ ಸಾಧ್ಯವಾಯಿತು.

ಅಮೆರಿಕದ ಒಟ್ಟು ವಿಸ್ತೀರ್ಣ ೩೫,೩೯,೩೪೧ ಚ.ಮೈಲಿಗಳು. ಜನಸಂಖ್ಯೆ ಸುಮಾರು ೨೭೦ ದಶಲಕ್ಷ (೨೭ ಕೋಟಿ). ಭಾರತಕ್ಕೆ ಹೋಲಿಸಿದರೆ, ಮೂರರಷ್ಟು ಹೆಚ್ಚು ವಿಸ್ತಾರವಾಗಿದ್ದು ಜನಸಂಖ್ಯೆ ಮಾತ್ರ ಭಾರತದ ಕಾಲುಭಾಗದಷ್ಟಿದೆ. (೨೬%).

### *ನಯಾಗರಾಕ್ಕೆ ಪ್ರಯಾಣ*

ನಾವು ಅಂದರೆ; ನಾನು, ನನ್ನ ಶ್ರೀಮತಿ, ಮಗ ಮತ್ತು ಸೊಸೆ ದಿನಾಂಕ : ೧೪-೯-೯೫ ಗುರುವಾರ ನಯಾಗರ ಜಲಪಾತವನ್ನು ನೋಡಲು ಬಾಸ್ಟನ್ ನಗರದಿಂದ ಕಾರಿನಲ್ಲಿ ಹೊರಟೆವು. ನಯಾಗರಾ ನ್ಯೂಯಾರ್ಕ್ ಪ್ರಾಂತದಲ್ಲಿದೆ. ಬಾಸ್ಟನ್‌ನಿಂದ ಬಫಾಲೊ ನಗರಕ್ಕೆ ಸುಮಾರು ೪೫೦ ಮೈಲಿಗಳಾಗುತ್ತವೆ. ನಯಾಗರಾ ಜಲಪಾತವು ಬಫಾಲೊ ನಗರದಿಂದ ೧೦-೧೨ ಮೈಲಿ ದೂರದಲ್ಲಿದೆ. ಸಾಯಂಕಾಲ ೫ ಗಂಟೆಗೆ ಬಾಸ್ಟನ್‌ನಿಂದ ಹೊರಟು, ಅಂತರ ಪ್ರಾಂತೀಯ ಹೆದ್ದಾರಿ ಐ-೯೦ಯಲ್ಲಿ ಪ್ರಯಾಣ ಮಾಡಿ, ನ್ಯೂಯಾರ್ಕ್ ಪ್ರಾಂತದ ರಾಜಧಾನಿ ಆಲ್ಬೆನಿ ನಗರದ ಮುಖಾಂತರ ರಾತ್ರಿ ೧೧-೪೫ಕ್ಕೆ ಬಫಾಲೊ ನಗರ ತಲುಪಿ ಅಲ್ಲಿಯೇ ಉಳಿದುಕೊಂಡೆವು.

### *ಕೆನೆಡಿಯನ್ ವೀಸಾ*

ದಿನಾಂಕ : ೧೫-೯-೯೫ರಂದು ಬೆಳಿಗ್ಗೆ ಬಫಾಲೋ ನಗರದಲ್ಲಿರುವ ಕೆನಡಿಯನ್ ಕಾನ್ಸುಲೇಟ್‌ಗೆ ಹೋಗಿ ನನಗೆ





### *ನದಿಯ ವಿವರಗಳು*

೧. ನದಿಯ ಉದ್ದ... ೩೫ ಮೈಲಿಗಳು (೫೮ ಕಿ.ಮೀ.)

೨. ಉಗಮ ... ಈರಿ ಸರೋವರ

೩. ಅಂತ್ಯ ... ಆಂಟೇರಿಯೋ ಸರೋವರ

೪. ಜಲಾನಯನ ಪ್ರದೇಶ (Catchment) ...... ೨೬೪,೦೦೦ ಚ.ಮೈ. (೬೮೪೦೦೦ ಚ.ಕಿ.ಮೀ.)

೫. ನದಿಯ ಹರಿವು ...

ಏಪ್ರಿಲ್-ಅಕ್ಟೋಬರ್‌ವರೆಗೆ .......... ೨೮೩೨ ಕ್ಯೂ.ಮೀ./ಸೆಕೆಂಡ್.

ಬೇರೆ ಕಾಲದಲ್ಲಿ.... ೧೪೧೬ ಕ್ಯೂ.ಮೀ./ಸೆಕೆಂಡ್

(ಉಳಿದ ನೀರನ್ನು ಅಮೆರಿಕ ಮತ್ತು ಕೆನಡದ ಜಲವಿದ್ಯುತ್ ಉತ್ಪಾದನೆಗೆ ಉಪಯೋಗಿಸುತ್ತಾರೆ).

೬. ನದಿಯ ಆಳ (Gorge depth) ... ೧೦೭ ಕಿ.ಮೀ. (೩೫೧ ಅಡಿಗಳು).

೭. ನದಿಯ ವೇಗ ...... ಗಂಟೆಗೆ ೬೪ ಕಿ.ಮೀ.

೮. ಸುಳಿಯಿರುವ ಜಾಗದ ಆಳ (Whil pool depth) ........................ ೩೮ ಮೀ. (೧೨೫ ಅಡಿಗಳು)

೯. ಒಟ್ಟಾರೆ ನದಿಯ ಹರಿವು .... ೬೦೦೦ ಕೂ.ಮೀ./ಸೆಕೆಂಡ್

### *ಜಲಪಾತದ ವಿವರಗಳು*

**ಅಮೆರಿಕನ್ ಫಾಲ್ಸ್**

೧. ಅಗಲ ... ೧೦೬೦ ಅಡಿಗಳು (೩೨೦ ಮೀ.)

೨. ಆಳ ... ೧೮೦ ಅಡಿಗಳು (೫೫ ಮೀ.)

**ಲಾಳಾಕಾರದ ಜಲಪಾತ**

೧. ಅಗಲ ... ೨೨೦೦ ಅಡಿಗಳು (೬೭೫ ಮೀ.)

೨. ಆಳ ... ೧೭೦ ಅಡಿಗಳು (೫೨ ಮೀ.)

ಮತ್ತು ನನ್ನ ಶ್ರೀಮತಿಗೆ ವೀಸಾ ತೆಗೆದುಕೊಂಡೆವು. ಪ್ರತಿಯೊಬ್ಬರಿಗೆ ವೀಸಾ ಶುಲ್ಕ $೪೦.೦೦ ಕೊಡಬೇಕಾಗುತ್ತದೆ. ನಯಾಗರಾ ನದಿಯು ಅಮೆರಿಕಾ ಮತ್ತು ಕೆನಡ ದೇಶದ ಅಂತರರಾಷ್ಟ್ರೀಯ ಗಡಿಯಾಗಿ ಹರಿಯುತ್ತಿದೆ. ಈ ಜಲಪಾತವು ಕೆನಡ ಕಡೆಯಿಂದ ಅತಿ ಆಕರ್ಷಕವಾಗಿರುತ್ತದೆಯಾದ್ದರಿಂದ ಕೆನಡ ದೇಶದ ವೀಸಾ ತೆಗೆದುಕೊಳ್ಳುವುದು ಅವಶ್ಯಕ. ನಾವು ಬೆಳಿಗ್ಗೆ ೧೦ ಗಂಟೆಗೆ ಬಫಾಲೋ ನಗರದಿಂದ ನಯಾಗರಾಗೆ ಪ್ರಯಾಣ ಮಾಡಿದೆವು.

### *ನಯಾಗರಾ ಜಲಪಾತ*

ನಯಾಗರಾ ನದಿಯು ಅಮೆರಿಕದ ಗೋಟ್ ದ್ವೀಪವನ್ನು ಬಳಸಿ (Goat Island) ಎರಡು ಭಾಗವಾಗಿ ಧುಮುಕುತ್ತಿದೆ. ಇದು ಈರಿ ಸರೋವರದಲ್ಲಿ ಹುಟ್ಟಿ, ಕೇವಲ ೩೫ ಮೈಲಿಗಳ ದೂರ ಹರಿದು ಆಂಟೇರಿಯೋ ಸರೋವರವನ್ನು ಸೇರುತ್ತದೆ. ಈ ಜಲಪಾತ ವಿಶ್ವದ ಏಳು ಅದ್ಭುತಗಳಲ್ಲಿ ಒಂದೆಂದು ಪರಿಗಣಿಸಲ್ಪಟ್ಟಿದೆ. ಮೊದಲ ಬಾರಿಗೆ ಇದನ್ನು ನೋಡಿದಾಗ ಆಶ್ಚರ್ಯಚಕಿತರಾಗುತ್ತೇವೆ. ಅದರ ಸ್ನಿಗ್ಧ ಸೌಂದರ್ಯವು ಪ್ರವಾಸಿಗಳನ್ನು ಮೂಕವಿಸ್ಮಿತರನ್ನಾಗಿಸುತ್ತದೆ. ಇದರ ಅನುಪಮ ಸೊಬಗಿಗೆ ಪ್ರತಿ ಪ್ರವಾಸಿಗನೂ ಮಾರು ಹೋಗಿ, ಇದೊಂದು ಭಗವಂತನು ಮಾನವತೆಗೆ ನೀಡಿರುವ ಅದ್ಭುತ ಕೊಡುಗೆ ಎಂದು ಉದ್ಗಾರ ತೆಗೆಯುತ್ತಾನೆ. ಅದರ ಭವ್ಯತೆಯನ್ನು ನೋಡಿದಾಗ ಆಗುವ ಆನಂದಾನುಭವ ಅವರ್ಣನೀಯ.

ಈ ಜಲಪಾತವು ಎರಡು ಭಾಗಗಳಾಗಿ, ಒಂದು ಗೋಟ್ ದ್ವೀಪದ ಕಡೆಯಿಂದಲೂ ಇನ್ನೊಂದು ವಿಶಾಲವಾಗಿ ಕುದುರೆಯ ಲಾಳದ ಆಕಾರದಿಂದ (Horse-shoe) ಧುಮುಕುತ್ತದೆ. ಅಮೆರಿಕಾ ಕಡೆಯಿಂದ ನೋಡಿದಾಗ ಲಾಳಾದಾಕಾರದ ಜಲಪಾತವು ಪೂರ್ಣವಾಗಿ ಕಾಣುವುದಿಲ್ಲ. ಕೆನಡದ ಕಡೆಯಿಂದ ನೋಡಿದಾಗ ಸಂಪೂರ್ಣ ಸೊಬಗಿನಿಂದ ನಯನ ಮನೋಹರವಾಗಿ ಕಾಣುತ್ತದೆ. ಪ್ರಕೃತಿಯ ರಹಸ್ಯವನ್ನು ಪೂರ್ಣ ಅರಿಯುವುದು ಅಸಾಧ್ಯವೆಂದು ಈ ಜಲಪಾತವನ್ನು ನೋಡಿದಾಗ ಅನುಭವವಾಗುತ್ತದೆ. ಅದರ ವೈಭವ, ಸೊಬಗು, ಅಗಾಧತೆ ಮತ್ತು ಅದರ ಭವ್ಯತೆಯನ್ನು ಮಾತ್ರ ಮಾನವ ಅನುಭವಿಸಿ ಆನಂದಿಸಬಲ್ಲ. ಅಂತಹ ಒಂದು ಪ್ರಕೃತಿ ಪವಾಡ ಸದೃಶ ಕೊಡುಗೆಯೇ ಈ ನಯಾಗರಾ. ಹಾಲಿನ ಮತ್ತು ತಿಳಿ ನೀಲಿ ಬಣ್ಣದಿಂದ



ನಯಾಗರಾ ಜಲಪಾತ

ಕೂಡಿದ ಸತತವಾಗಿ ಸುರಿಯುವ ಜಲಧಾರೆ, ನೊರೆ ನೊರೆಯಾಗಿ, ತುಂತುರು ತುಂತುರಾಗಿ, ಹೊಗೆಯಾಗಿ ಮೇಲೇಳುತ್ತ, ಅದರಿಂದ ಸೃಷ್ಟಿಯಾಗುವ ಅಸಂಖ್ಯ ಕಾಮನಬಿಲ್ಲುಗಳ ಅಪೂರ್ವ ಸೌಂದರ್ಯವನ್ನು ವರ್ಣಿಸುವುದು ಕಷ್ಟ ಸಾಧ್ಯ. ಆ ಜಲರಾಶಿಯ ವೈಶಾಲ್ಯತೆ, ಅದರ ಲಲಾಟ, ಸುಂದರ ವಾತಾವರಣ ಎಲ್ಲರನ್ನು ಮಂತ್ರ ಮುಗ್ಧರನ್ನಾಗಿಸಿ ಬೇರೊಂದು ಲೋಕಕ್ಕೆ ಕರೆದೊಯ್ಯುತ್ತವೆ. ಅದರ ದರ್ಶನದಿಂದ ಸಾರ್ಥಕತೆಯ ಭಾವನೆ ಮೂಡುತ್ತದೆ. ಇದೊಂದು ಅಲೌಕಿಕ ಅನುಭವವೆಂದು ಭಾಸವಾಗುತ್ತದೆ.

### *ಮೊದಲು ನೋಡಿದ ವಿದೇಶೀಯ*

**ಈ** ಜಲಪಾತ ಸಾವಿರಾರು ವರ್ಷಗಳ ಹಿಂದೆ ಬೃಹತ್ತಾದ ಮಂಜುಗಡ್ಡೆಯ ಕುಸಿತ ಹಾಗೂ ಕರಗುವಿಕೆಯಿಂದ ಸೃಷ್ಟಿಯಾಯಿತೆಂದು (Formed due to necession and melting of mammooth sheet of Ice) ಹೇಳುತ್ತಾರೆ.

ಇದನ್ನು ಮೊದಲು ನೋಡಿದವರು ''ಸೆನೆಕ ಇಂಡಿಯನ್ಸ್'' ಎಂಬ ಇಲ್ಲಿನ ಮೂಲನಿವಾಸಿಗಳು. ಈ ಪ್ರದೇಶದಲ್ಲಿ ವಾಸಿಸುತ್ತಿದ್ದ ಈ ಮೂಲ ನಿವಾಸಿಗಳು ಸುಮಾರು ೨೦೦೦ ಸಂಖ್ಯೆಯಷ್ಟಿದ್ದರು. ಈ ಜಲಪಾತವನ್ನು ಮೊದಲು ನೋಡಿದ ವಿದೇಶೀಯನೆಂದರೆ ಫ್ರಾನ್ಸ್ ದೇಶದ ಲೂಯಿಸ್ ಹೆನ್ನೆಪಿನ್ (Louis Henepin) ಎಂಬ ಒಬ್ಬ ಪಾದ್ರಿ. ಇದನ್ನು ೧೬೭೮ರಲ್ಲಿ ಈತನು ಪ್ರಪ್ರಥಮವಾಗಿ ನೋಡಿದಾಗ ಇದರ ಅದ್ಭುತ ಸೌಂದರ್ಯಕ್ಕೆ ಮಾರುಹೋಗಿ, ಅದಕ್ಕೆ ನಮಸ್ಕರಿಸಿ ಹೀಗೆ ಹೇಳುತ್ತಾನೆ. ''ಈ ಜಗತ್ತು ಇಂತಹ ಇನ್ನೊಂದು ಅದ್ಭುತವನ್ನು ನೋಡಲು ಅಥವಾ ಹೊಂದಲು ಸಾಧ್ಯವಿಲ್ಲ'' (This Universe does not afford its parcelld) ಎಂದು.

### *ಜಲಪಾತ ವೀಕ್ಷಣೆ*

**ಈ** ಜಲಪಾತವನ್ನು ಹತ್ತಿರದಿಂದ ನೋಡಲು ಟಿಕೆಟ್ ತೆಗೆದುಕೊಳ್ಳಬೇಕು. ಇದನ್ನು ಬ್ರೈಡಲ್‌ವೀಲ್ ಫಾಲ್ಸ್‌ಗೆ ಪ್ರಯಾಣ (Journey to Brindalveil Falls) ಎಂದು ಕರೆಯುತ್ತಾರೆ. ಇದೊಂದು ಸಾಹಸ ಯಾತ್ರೆ. ಜಲಪಾತದ ಹತ್ತಿರದಲ್ಲಿ ಬೀಸುವ ಗಾಳಿ ಮತ್ತು ನೀರಹನಿಗಳಿಂದ ರಕ್ಷಿಸಲು ರೈನ್‌ಕೋಟ್ ಮತ್ತು ಪಾದರಕ್ಷೆಗಳನ್ನು ಧರಿಸಬೇಕಾಗುತ್ತದೆ. ಲಿಫ್ಟ್‌ಗಳಲ್ಲಿ ಕೆಳಗಿಳಿದು, ಸುರಂಗಮಾರ್ಗದ ಮುಖಾಂತರ ಬಂದು ಮೆಟ್ಟಲುಗಳನ್ನೇರಿ ಜಲಪಾತದ ಹತ್ತಿರಕ್ಕೆ ಹೋಗಬೇಕಾಗುತ್ತದೆ. ಅಲ್ಲಿ ಬಿರುಸಾಗಿ ಬೀಸುವ ಗಾಳಿ, ತುಂತುರು, ತುಂತುರಾಗಿ ರಾಚುವ ನೀರ ಹನಿಗಳು, ಹತ್ತಿರದಿಂದ ಕಾಣುವ ಜಲಪಾತದ ರೌದ್ರ ಸೌಂದರ್ಯ ಇವುಗಳ ಅನುಭವವು ಒಂದು ಸಾಹಸವೇ ಸರಿ. ನೀರಹನಿಗಳಿಂದ ಸೃಷ್ಟಿಯಾಗುವ ಕಾಮನಬಿಲ್ಲುಗಳನ್ನು ನೋಡುವುದು ಕಣ್ಣಿಗೊಂದು ಹಬ್ಬ. ಜಲಪಾತದ ದೂರದಿಂದ ಕಾಣುವ ಅದರ ಸ್ನಿಗ್ಧ ಸೌಂದರ್ಯಕ್ಕೂ, ಅತಿ ಸನಿಹದಿಂದ ಕಾಣುವ ಅದರ ಭೀಭತ್ಸ ಸೌಂದರ್ಯಕ್ಕೂ ಇರುವ ಅಂತರದ ಅನುಭವ ನಮಗಾಯಿತು. ಜಲಪಾತದ ಸನಿಹಕ್ಕೆ ಬರಲಾಗದಿದ್ದವರು, ಸ್ವಲ್ಪ ದೂರದಲ್ಲಿರುವ ಮರದ ಅಟ್ಟಣೆಯ ಮೇಲೆ ನಿಂತು ಅದರ ಸೊಬಗನ್ನು ನೋಡಬಹುದು. ಪುನಃ ಲಿಫ್ಟ್‌ಗಳ ಮುಖಾಂತರ ನಾವು ಹಿಂತಿರುಗಿದೆವು.

> ನಯಾಗರ ಬಹಳ ಸುಂದರ ನಗರ. ಇದು ವಿಶ್ವದ ಅತಿ ಹೆಚ್ಚಿನ ಆಕರ್ಷಣೆವುಳ್ಳ ಪ್ರವಾಸಿ ತಾಣಗಳಲ್ಲಿ ಒಂದಾಗಿದೆ. ಪ್ರತಿವರ್ಷ ಇಲ್ಲಿಗೆ ೧೨ರಿಂದ ೧೫ ದಶಲಕ್ಷ ಜನರು ಪ್ರವಾಸಿಗಳಾಗಿ ಬರುತ್ತಾರೆ.





### *ಲಾಳಾಕಾರದ ಜಲಪಾತದ ವೀಕ್ಷಣೆ (Horse Shoe Falls)*

**ಅ**ಮೆರಿಕ ಮತ್ತು ಕೆನಡ ದೇಶಗಳ ನಡುವೆ ನಯಾಗರಾ ನದಿಯು ಅಂತರ ರಾಷ್ಟ್ರೀಯ ಗಡಿಯಾಗಿರುತ್ತದೆ. ಈ ಜಲಪಾತದ ಪೂರ್ಣ ವೀಕ್ಷಣೆಗೆ ''ರೈನ್ ಬೊ'' ಸೇತುವೆಯನ್ನು ದಾಟಿ ನಯಾಗರಾ ಪಟ್ಟಣದ ಕಡೆಗೆ ಬರಬೇಕಾಗುತ್ತದೆ. ಸೇತುವೆಯ ಮೇಲೆ ಇಮ್ಮಿಗ್ರೇಶನ್ ಅಧಿಕಾರಿಗಳು ನಮ್ಮ ವೀಸಾಗಳನ್ನು ತಪಾಸಣೆ ಮಾಡಿ ಕೆನಡ ದೇಶದೊಳಕ್ಕೆ ಹೋಗಲು ಅನುಮತಿ ನೀಡುತ್ತಾರೆ. ನಾವು ಅಂದು ''ಡೇಸ್ ಇನ್'' (Days Inn) ಎಂಬ ಹೋಟೆಲಿನ ೧೨ನೇ ಮಹಡಿಯಲ್ಲಿ ಉಳಿದುಕೊಂಡೆವು. ನಮ್ಮ ಕೊಠಡಿಯಿಂದ ಸುಮಾರು ಅರ್ಧ ಕಿ.ಮೀ. ದೂರದಲ್ಲಿ ಅವ್ಯಾಹಿತವಾಗಿ ಧುಮುಕುತ್ತಿರುವ ಜಲಪಾತದ ಸುಂದರ ದೃಶ್ಯ ಕಾಣುತ್ತಿತ್ತು.



ನಯಗರಾ ಜಲಪಾತದ ಮುಂದೆ ಶ್ರೀ ಚೆನ್ನಪ್ಪ ದಂಪತಿಗಳು

ಇಲ್ಲಿಂದ ಎರಡೂ ಜಲಪಾತಗಳ ಪೂರ್ಣ ಸೌಂದರ್ಯವನ್ನು ಸವಿಯಬಹುದು. ಇದೊಂದು ಅದ್ಭುತ ಹಾಗೂ ಅಲೌಕಿಕ ಸೊಬಗಿನಿಂದ ಕೂಡಿದ ಜಲಪಾತ. ಸೃಷ್ಟಿಯ ಚಮತ್ಕಾರ, ಅದರ ಭವ್ಯತೆಯನ್ನು ಆನಂದಿಸುವಾಗ ನಮ್ಮನ್ನು ನಾವು ಮರೆತು ಪ್ರಕೃತಿಯಲ್ಲಿ ಬೆರೆತು ಹೋದ ಅನುಭವವಾಯಿತು. ಪ್ರಕೃತಿಯೆದುರು ಮಾನವ ಹಾಗೂ ಅವನ ಪ್ರಗತಿಯು ಎಷ್ಟು ತೃಣ ಎಂಬ ಭಾವನೆಯೊಂದಿಗೆ ನಮ್ಮ ಜೀವನದ ಸಾರ್ಥಕತೆಯ ಸಂತೃಪ್ತಿ ನಮಗೆ ದೊರೆಯಿತು.

### *''ಮೈಡ್ ಆಫ್ ದಿ ಮಿಸ್ಟ್'' ಪ್ರಯಾಣ*

**ಈ** ಜಲಪಾತವನ್ನು ಹತ್ತಿರದಿಂದ ನೋಡಲು ಫೆರ್ರಿಗಳಲ್ಲಿ ಪ್ರವಾಸಿಗರನ್ನು ಕರೆದೊಯ್ಯುತ್ತಾರೆ. ಇದನ್ನು ''ಮೈಡ್ ಆಫ್ ದಿ ಮಿಸ್ಟ್''ಗೆ ಪ್ರಯಾಣ ಎಂದು ಕರೆಯುತ್ತಾರೆ. (Maid of the Mist). ಸುಮಾರು ೪೦೦ ಜನರು ಇದರಲ್ಲಿ ಪ್ರಯಾಣಿಸಬಹುದು. ಟಿಕೆಟ್ ತೆಗೆದುಕೊಂಡ ಮೇಲೆ ಒಂದು ಪ್ಲಾಸ್ಟಿಕ್ ರೈನ್‌ಕೋಟ್ ಧರಿಸಲು ಕೊಡುತ್ತಾರೆ. ಇದರಿಂದ ಬಟ್ಟೆಗಳು ಒದ್ದೆಯಾಗದಂತೆ ರಕ್ಷಿಸಬಹುದು. ನಮ್ಮನ್ನು ರಭಸದಿಂದ ಧುಮ್ಮಿಕ್ಕುವ ಜಲಪಾತದ ಹತ್ತಿರದವರೆಗೂ ಕರೆದೊಯ್ಯುತ್ತಾರೆ. ಕ್ಷೀರಧಾರೆಯಂತೆ ಒಂದೇ ಸಮನೆ ಸುರಿಯುವ ಜಲಪಾತದ ಎದುರಿಗೆ ನಿಲ್ಲಿಸಿದಾಗ ಅದರ ರುದ್ರ ಭಯಂಕರ ಸೌಂದರ್ಯವನ್ನು ಆಸ್ವಾದಿಸಿದೆವು. ಎದುರಾದ ಜಲರಾಶಿಯನ್ನುಳಿದು ಎಲ್ಲವನ್ನು ಮರೆಯುತ್ತೇವೆ. ಪ್ರಕೃತಿಯಲ್ಲಿಯೇ ಲೀನವಾಗುತ್ತೇವೆ. ಆಗ ಪ್ರಕೃತಿಯ ವಿರಾಟ್ ಸ್ವರೂಪದ ಅರಿವಾಗಿ ಈ ಜಗತ್ತು ಎಷ್ಟು ಸುಂದರ ಎನಿಸಿ, ಭಗವಂತನಿಗೆ ನಮ್ಮ ಕೃತಜ್ಞತೆಯನ್ನು ಸಲ್ಲಿಸಿದೆವು. ಸುಮಾರು ೧೭೦-೧೮೦ ಅಡಿಗಳ ಎತ್ತರದಿಂದ ಬಿಳಿ ಹಾಗೂ ತಿಳಿ ನೀಲಿ ಬಣ್ಣದಲ್ಲಿ ಧುಮ್ಮಿಕ್ಕುವ ಆ ಜಲಧಾರೆಯ ನೀರು ತುಂತುರು ತುಂತುರಾಗಿ ಮಂಜಿನ ಹೊಗೆಯಗಿ ಮೇಲೇಳುವ ಆ ಅಪರೂಪದ ದೃಶ್ಯವು ದೇವರು ನಮಗೆ ಕರುಣಿಸಿದ ವರ. ಇದರಿಂದಾಗಿ ನಿರ್ಮಾಣವಾಗುವ ಕಾಮನಬಿಲ್ಲುಗಳ ಆಕರ್ಷಣೆ, ಹಾರಾಡುವ ಹಕ್ಕಿಗಳ ಕಲರವ, ಜಲಪಾತದ ರುದ್ರತಾಂಡವ ನೃತ್ಯ, ಅದರ ಲಾಸ್ಯ ಮತ್ತು ಭೋರ್ಗರೆತ, ಇವೆಲ್ಲವೂ ನಮ್ಮನ್ನು ಬೇರೊಂದು ಲೋಕಕ್ಕೆ ಕೊಂಡೊಯ್ದು, ಜೀವನ ಸಾರ್ಥಕವಾದಂತೆ ಅನಿಸುತ್ತದೆ. ಇದರ ದಿವ್ಯಾನುಭವವೇ ಜಗತ್ತಿನ ಲಕ್ಷೋಪಲಕ್ಷ ಪ್ರವಾಸಿಗರನ್ನು ಅಯಸ್ಕಾಂತದಂತೆ ಸೆಳೆಯುತ್ತ ವಿಶ್ವದ ಚಲನೆಯ ಪ್ರತೀಕವಾಗಿ ತನ್ನಪಾಡಿಗೆ ತಾನು ನಿರಂತರವಾಗಿ ಹರಿಯುತ್ತಿದೆ. ಇಲ್ಲಿ ಪ್ರತಿ ಹದಿನೈದು ನಿಮಿಷಕ್ಕೊಂದರಂತೆ ಫೆರ್ರಿಗಳು ಸಂಚರಿಸುತ್ತವೆ.




ನಯಾಗರಾ ಜಲಪಾತದ ಮುಂದೆ ಶ್ರೀ ಚೆನ್ನಪ್ಪ ಅವರು

ಪ್ರವಾಸಿಗಳನ್ನು ಧುಮುಕುವ ಜಲಪಾತದ ನೀರಿನ ಹಿಂದುಗಡೆ ನಿಂತು ನೋಡಲು ಅವಕಾಶವನ್ನು ಕಲ್ಪಿಸಿದ್ದಾರೆ. ಇದಕ್ಕೆ (Jourey behind the Falls) ಜಲಪಾತದ ಹಿಂದಕ್ಕೆ ಪ್ರಯಾಣ ಎಂದು ಕರೆಯುತ್ತಾರೆ. ಲಾಳದ ಆಕಾರದ ಜಲಪಾತದ ಬದಿಯಲ್ಲಿರುವ ಟೇಬಲ್ ರಾಕ್‌ಹೌಸ್‌ನಲ್ಲಿ ಟಿಕೆಟ್ ಪಡೆದು ರೈನ್‌ಕೋಟ್ ಧರಿಸಬೇಕಾಗುತ್ತದೆ. ಎಲಿವೇಟರ್‌ನಲ್ಲಿ ೩೦ ಮೀ. (೧೨೫ ಅಡಿ) ಆಳಕ್ಕೆ ಇಳಿದು ಸುಮಾರು ೨೦೦ ಮೀ. (೬೫೦ ಅಡಿ) ಉದ್ದದ ಸುರಂಗಮಾರ್ಗದಲ್ಲಿ ನಡೆದು ಜಲಪಾತದ ಸುರಿಯುವ ನೀರಿನ ಪರದೆಯ (screen) ಹಿಂದಕ್ಕೆ ಬಂದು ನಿಂತು ವೀಕ್ಷಿಸಬಹುದಾಗಿದೆ. ಅವಿರತವಾಗಿ ಸುರಿಯುವ ನೀರು ನಮಗೆ ಗೋಡೆಯಂತೆ ಕಾಣುತ್ತದೆ. ಅಷ್ಟು ಹತ್ತಿರದಿಂದ ನೋಡುವಾಗ ಅದರ ಭವ್ಯ ಸೌಂದರ್ಯದ ಅರಿವಾಗುತ್ತದೆ. ಗಾಳಿಯ ರಭಸದಿಂದ ರಾಚುವ ನೀರಿನ ಹನಿಗಳು, ಹಕ್ಕಿಗಳ ಹಾರಾಟ, ಬೀಳುವ ನೀರಿನ ಪ್ರಮಾಣ ಹಾಗೂ ಆಳಿಯ ವೇಗಕ್ಕನುಗುಣವಾಗಿ ನಡೆಸುವ ಲಾಸ್ಯ, ವರ್ಣರಂಜಿತ ಕಾಮಬಿಲ್ಲುಗಳು ಇವೆಲ್ಲವನ್ನು ಪ್ರಕೃತಿಯ ಮಡಿಲಲ್ಲೇ ನಿಂತು ನೋಡುವ ಸೌಭಾಗ್ಯ ನಮ್ಮದಾಯಿತು. ಭಗೀರಥನ ಪ್ರಾರ್ಥನೆಯಂತೆ, ಪಾವನಗಂಗೆಯು ಸ್ವರ್ಗದಿಂದ ಭೂಮಿಗೆ ತನ್ನೆಲ್ಲಾ ಆರ್ಭಟದಿಂದ ಧುಮ್ಮಿಕ್ಕಿ ಆಮೇಲೆ ಶಿವನ ಜಟೆಯಲ್ಲಿ ಸಿಲುಕಿ ಸ್ತಬ್ಧಳಾದಂತೆ ನದಿಯು ಹರಿಯುತ್ತಿರುತ್ತದೆ. ಮಾತಿಗೆ ಸಿಲುಕದ ಅಪೂರ್ವ ಅನುಭವದ ನೆನಪು ಇಂದಿಗೂ ಕಾಡುತ್ತಿದೆ.

### *ಜಲಪಾತದಿಂದಾಗುತ್ತಿರುವ ಸವೆತ*

**ಈ** ಜಲಪಾತವು ಒಂದು ವರ್ಷಕ್ಕೆ ಒಂದು ಅಂಗುಲದಷ್ಟು ಸವೆಯುತ್ತಿದೆ. ಒಂದೇ ಸಮನೆ ಹರಿಯುವ ನೀರಿನ ವೇಗವು ಈ ಸವೆತಕ್ಕೆ ಕಾರಣವಾಗಿದೆ. ಇದರಿಂದ ಇನ್ನು ೨೫೦೦ ವರ್ಷಗಳಲ್ಲಿ ಈ ಜಲಪಾತವು ಇಲ್ಲವಾಗಬಹುದೆಂದು ಊಹಿಸಲಾಗಿದೆ. ಈ ಸವೆತದಿಂದ ಮುಂದೊಂದು ದಿನ ಈ ಜಲಪಾತವು ಅದೃಶ್ಯವಾದರೆ, ಭವಿಷ್ಯದಲ್ಲಿ ಮಾನವನು ವಿಶ್ವದ ಒಂದು ಅಭೂತ ಪೂರ್ವ ಸೌಂದರ್ಯದ ದಿವ್ಯಾನುಭವದಿಂದ ವಂಚಿತನಾಗುತ್ತಾನೆಂದರೆ ಅದು ಒಂದು ವಿಷಾದದ ಸಂಗತಿ. ಈ ಸೃಷ್ಟಿಯ ಅನೇಕ ರಹಸ್ಯಗಳು ಮನುಷ್ಯನ ಮನಸ್ಸಿಗೆ ಇನ್ನೂ ನಿಲುಕದ ರಹಸ್ಯಗಳಾಗಿಯೇ ಉಳಿಯುವುದರಲ್ಲಿ ಸಂದೇಹವಿಲ್ಲ.

### *ನಯಾಗರದಲ್ಲಿನ ಇತರ ಆಕರ್ಷಣೆಗಳು*

ನಯಾಗರ ನದಿಯ ಇಕ್ಕೆಲಗಳಲ್ಲಿ ಸಾವಿರಾರು ಎಕರೆ ಪ್ರದೇಶವನ್ನು ಸುಂದರ ಉದ್ಯಾನವನವನ್ನಾಗಿ ಪರಿವರ್ತಿಸಿದ್ದಾರೆ. ನದಿಯು ಸಾಕಷ್ಟು ಅಗಲವಾಗಿದ್ದು ಅಲ್ಲಲ್ಲಿ ಸಣ್ಣ ರ್‍ಯಾಪಿಡ್ಸ್ (Rapids) ಗಳನ್ನು ಹೊಂದಿದೆ. ಈ ರ್‍ಯಾಪಿಡ್ಸ್‌ಗಳಲ್ಲಿ ನದಿಯೂ ಬೀಳುತ್ತಾ ಏಳುತ್ತಾ, ನೊರೆ ಹಾಲಿನಂತೆ ಹರಿಯುವುದನ್ನು ನೋಡಲು ಬಹಳ ಚೇತೋಹಾರಿಯಾಗಿರುತ್ತದೆ. ಈ ನಯಾಗರಾ ರಾಷ್ಟ್ರೀಯ ಉದ್ಯಾನವನ (Niagara National Park) ವನ್ನು ಎರಡೂ ದೇಶಗಳು ನಿರ್ವಹಿಸುತ್ತಿವೆ. ನಯಾಗರ ಪಾರ್ಕ್ ಕಮಿಷನ್ ಎಂಬ ಜಂಟಿ ಸಂಸ್ಥೆಯು ಇದನ್ನು ನೋಡಿಕೊಳ್ಳುತ್ತಿದೆ. ಇಲ್ಲಿ ಅಪರೂಪದ ಮರಗಳನ್ನು, ಹುಲ್ಲುಹಾಸುಗಳನ್ನು, ಹೂಗಿಡಗಳನ್ನು ಬೆಳೆಸಿ ಬಹಳ ಸುಂದರವಾಗಿ ಇಟ್ಟುಕೊಂಡಿದ್ದಾರೆ.

ಇಲ್ಲಿನ ಇತರ ಪ್ರಮುಖ ಪ್ರವಾಸಿ ಆಕರ್ಷಣೆಗಳೆಂದರೆ ಎಡದಂಡೆಯ ನಯಾಗರ ಪಟ್ಟಣದ ಕ್ಲಿಫ್ಟನ್ ಹಿಲ್ ಪ್ರದೇಶ, ವ್ಯಾಕ್ಸ್‌ಮ್ಯೂಸಿಯಂ, ರಿಪ್ಲೇಸ್ ಬಿಲೀವ್ ಇಟ್ ಆರ್‌ನಾಟ್ ಮ್ಯೂಸಿಯಂ, ಗಿನ್ನಿಸ್ ಮ್ಯೂಸಿಯಂ, ಫ್ಯಾಮಿಲಿ ಫನ್ ಸೆಂಟರ್, ರ್‍ಯೂಮರ್ಸ್ ನೈಟ್ ಕ್ಲಬ್, ಐಮ್ಯಾಕ್ಸ್ ಥಿಯೇಟರ್, ಮಿನೋಲ್ಟ ಗೋಪುರ, ಸ್ಕೈಲಾನ್ ಗೋಪುರ, ಮೇರಿನ್‌ಲ್ಯಾಂಡ್, ನಯಾಗರ ಪಾರ್ಕ್ ಗ್ರೀನ್ ಹೌಸ್, ಜಲವಿದ್ಯುದಾಗಾರ, ಬಟಾನಿಕಲ್ ಗಾರ್ಡನ್ಸ್, ನಯಾಗರ ಮ್ಯೂಸಿಯಂ, ಹೂವಿನ ಗಡಿಯಾರ (Floral Clock), ಬಂಡೀಸ್‌ವಾರ್ ಮೆಮೋರಿಯಲ್, ಹಾಗ್ಸ್‌ಷೂ ಇಂಕ್ಲೈನ್ (Hogg's Shoe Incline) ಸೇತುವೆಗಳು ಮತ್ತು ವಿರ್ಲ್‌ಪೂಲ್ (whirl pool) ಇತ್ಯಾದಿ.

೧. **ಐಮ್ಯಾಕ್ ಥಿಯೇಟರ್** : ಇದೊಂದು ವಿಶಿಷ್ಟವಾದ ಪರದೆಯನ್ನು ಹೊಂದಿದ ಥಿಯೇಟರ್. ಸಾಮಾನ್ಯ ಪರದೆಗಿಂತ (screen) ೧೦ ಪಟ್ಟು ದೊಡ್ಡದು. ಅಂದರೆ ಆರು ಮಹಡಿಗಳಷ್ಟು ಎತ್ತರದ ಪರದೆಯ ಮೇಲೆ ''ನಯಾಗರ : ಮಿಥ್ಸ್ ಮತ್ತು ಮ್ಯಾಜಿಕ್ (Nayagara : Miths and Magic) ಮತ್ತು ಡೇರ್ ಡೆವಿಲ್ ಅಡ್ವೆಂಚರ್ (Daredeivl Adventure) ಎಂಬ ಎರಡು ಚಿತ್ರಗಳನ್ನು ನೋಡಿದೆವು. ಮೊದಲನೆ ಚಿತ್ರವು ನಮ್ಮನ್ನು ೨೦೦೦ ವರ್ಷಗಳ ಹಿಂದಕ್ಕೆ ಕರೆದೊಯ್ಯುತ್ತದೆ. ಮೂಲನಿವಾಸಿ ಇಂಡಿಯನ್ನರ ಜೀವನ ವಿಧಾನವನ್ನು ತೋರಿಸಲಾಯಿತು. ಅದರಲ್ಲಿನ ಒಂದು ಘಟನೆಯು ಮನ ಕರಗಿಸುತ್ತದೆ. ಅದರ ಪ್ರಕಾರ, ಮೂಲ ನಿವಾಸಿಗಳ ಯಜಮಾನನು ತನ್ನ ಮಗಳನ್ನು ಆ ಊರಿನ ಒಬ್ಬ ಮುದುಕನಿಗೆ ಮದುವೆ ಮಾಡಿಕೊಡಲು ಮಾತುಕೊಟ್ಟಿರುತ್ತಾನೆ. ಅವಳು ಅತ್ಯಂತ ಸುಂದರಿ. ತಂದೆಯ ಮಾತಿನಂತೆ ನಿರಾಸೆಗೊಂಡ ಆ ಯುವತಿ ನಯಾಗರಾ ಜಲಪಾತದಲ್ಲಿ ಬಿದ್ದು ಅಸುನೀಗುತ್ತಾಳೆ. ಅವಳು ನದಿಯಲ್ಲಿ ಸೇರಿ ಹೋಗುತ್ತಾಳೆ. ಇಂದಿಗೂ ಜನ ಆ ದುರಂತದ ಬಗ್ಗೆ ಅಪಾರ ಅನುಕಂಪವನ್ನು ವ್ಯಕ್ತಪಡಿಸುತ್ತ, ಅವಳು ಆ ಜಲಪಾತದಲ್ಲಿ ಒಂದಾಗಿ ಹೋಗಿ ಅಲ್ಲಿನ ಆಗುಹೋಗುಗಳಿಗೆಲ್ಲಾ ಅವಳೇ ಕಾರಣಳಾಗಿದ್ದಾಳೆಂದು ನಂಬುತ್ತಾರೆ.

**ಈ** ಥಿಯೇಟರ್‌ನಲ್ಲಿ ಜಲಪಾತವನ್ನು ಆ ವಿಶಾಲ ತೆರೆಯ ಮೇಲೆ ತನ್ನೆಲ್ಲಾ ಸೌಂದರ್ಯವನ್ನು ಸೆರೆಹಿಡಿದು ತೋರಿಸಲಾಗುತ್ತದೆ. ನಮ್ಮ ನಮ್ಮ ಪೀಠದಲ್ಲಿ ಕುಳಿತಿರುವಂತೆಯೇ, ಆ ವಿಶಾಲ ತೆರೆಯ ಮೇಲೆ ಧುಮ್ಮಿಕ್ಕುವ ಜಲರಾಶಿಯ ಜೊತೆಯೇ ಪ್ರಯಾಣ ಮಾಡುತ್ತಿರುವಂತೆ ಆ ಸೊಬಗನ್ನು ಅದರ ಜೊತೆ ಜೊತೆಯೇ ಇದ್ದು ಸವಿಯುತ್ತಿರುವಂತೆ ಭಾಸವಾಗುತ್ತದೆ. ಜಲಪಾತದ ವೈಶಾಲ್ಯತೆ, ಅಲೌಕಿಕ ಸೊಬಗು, ಅದರ ರೌದ್ರತೆಯನ್ನು ವಿವಿಧ ಕೋನಗಳಿಂದ ಸೆರೆಹಿಡಿದು ಅಚ್ಚರಿಪಡುವಂತ ಅನುಭವ ನೀಡಲಾಗುತ್ತದೆ. ಅನೇಕ ಸಾಹಸಿಗಳು ಮಾಡಿರುವ ಎಲ್ಲ ಸಾಹಸಗಳನ್ನು ನೋಡುವಾಗ ಹೃದಯ ಬಾಯಿಗೆ ಬರುತ್ತದೆ. ಬ್ಲಾಂಡಿನ್ ಎಂಬುವವನು ೧೮೫೯ರಲ್ಲಿ ಪ್ರಥಮ ಬಾರಿಗೆ ತಂತಿಯ ಮೇಲೆ ಜಲಪಾತವನ್ನು ದಾಟಿದುದಲ್ಲದೆ ಅನೇಕ ಚಮತ್ಕಾರಗಳನ್ನು ತೋರಿಸುವುದನ್ನು ಪ್ರದರ್ಶಿಸುತ್ತಾರೆ. ಅನ್ನ ಟೇಲರ್ ಎಂಬ ಉಪಾಧ್ಯಾಯಿನಿ ಒಂದು ಪೀಪಾಯಿಯಲ್ಲಿ ಕುಳಿತು (೧೯೦೧ ರಲ್ಲಿ) ಜಲಪಾತದಿಂದ ಉರುಳಿಬಿದ್ದು ಬದುಕಿ ಬಂದದ್ದು, ಸ್ಯಾಮ್ ಪ್ಯಾಚ್ ಎಂಬುವವನು; ಎರಡು ಸಾರಿ ಜಲಪಾತದಲ್ಲಿ ಧುಮುಕಿ ಬದುಕಿ ಉಳಿದದ್ದು, ಮತ್ತು ೧೯೮೫ರಲ್ಲಿ ಡೇವ್ ಮಂಡಿ ಎಂಬಾತನು ಪಿಪಾಯಿಯಲ್ಲಿ ಕುಳಿತು ಧುಮುಕಿ ಉಳಿದುಬಂದಿದ್ದು ಮೊದಲಾದ ಸಾಹಸಗಳನ್ನು ಕಣ್ಣಿಗೆಕಟ್ಟುವಂತೆ ತೋರಿಸಲಾಯಿತು. ಈಗ ಇಂತಹ ಸಾಹಸಗಳನ್ನು ನಿಷೇಧಿಸಲಾಗಿದೆ.

**ಸ್ಕೈಲಾನ್ ಗೋಪುರ** : ನಯಾಗರದಲ್ಲಿ ಇದು ಅತ್ಯಂತ ಎತ್ತರವಾದ ಗೋಪುರ. ಇದರ ಎತ್ತರ ೭೭೫ ಅಡಿಗಳು. ಅಲ್ಲಿರುವ ಮೂರು ಗಾಜಿನ ಎಲಿವೇಟರ್ ಮುಖಾಂತರ ಮೇಲೆ ಹೋಗಿ ಜಲಪಾತದ ಅಪೂರ್ವ ಸೌಂದರ್ಯವನ್ನು ಸವಿಯಬಹುದು. ಮೇಲೆ ವೀಕ್ಷಣಾ ಪ್ರಾಂಗಣಗಳಿವೆ. ಪ್ರತಿ ಏಳು ನಿಮಿಷಗಳಿಗೊಮ್ಮೆ ಕೆಂಪು, ತಿಳಿ ನೀಲಿ ತಿಳಿ ಹಳದಿ ಬಣ್ಣಗಳಿಂದ ರಾತ್ರಿಯ ಹೊತ್ತು ಜಲಪಾತವನ್ನು ವಿದ್ಯುದ್ದೀಕರಣಗಳಿಂದ ಬೆಳಗಿಸುತ್ತಾರೆ. ವಿವಿಧ ಬಣ್ಣಗಳಲ್ಲಿ ಸುರಿಯುವ ಜಲಧಾರೆಯ ಸೌಂದರ್ಯವು ವರ್ಣಾನಾತೀತ. ಇಹ ಲೋಕದ ಅರಿವು ಕಳೆದುಕೊಂಡ ಮನಸ್ಸು ಕನಸಿನ ಲೋಕದಲ್ಲಿ ವಿಹರಿಸುತ್ತಿರುವಂತೆ ಭಾಸವಾಗುತ್ತದೆ. ಈ ಗೋಪುರದ ಮೇಲಿರುವ ಗೋಳವು ಮೂರು ಅಂತಸ್ತುಗಳನ್ನು (Dome) ಹೊಂದಿದೆ. ಅಲ್ಲಿ ಚಲಿಸುವ ಊಟದ ಹಜಾರ, ಆಧುನಿಕ ಸೌಲಭ್ಯದ ''ಬಫೆ'' ಊಟದ ಹೋಟೆಲ್, ೨೦ಕ್ಕೂ ಹೆಚ್ಚು ವ್ಯಾಪಾರಿ ಮಳಿಗೆಗಳು ಮತ್ತು ಮನೋರಂಜನೆ ನೀಡುವ ಅಮ್ಯೂಸ್‌ಮೆಂಟ್, ಮೊದಲಾದ ಅನುಕೂಲಗಳಿವೆ. ಊಟ ಮಾಡುತ್ತಲೇ ಜಲಪಾತದ ಸೊಬಗನ್ನು ಸವಿಯಬಹುದು. ಇದೊಂದು ನೋಡಲೇಬೇಕಾದ ಆಕರ್ಷಣೆ.

**ಮಿನೋಲ್ಟ ಗೋಪುರ** : ಇದು ಜಲಪಾತದ ಮಟ್ಟದಿಂದ ೩೨೫ ಅಡಿ ಎತ್ತರವಿದೆ. ಇದರ ಮೇಲ್ಭಾಗದಲ್ಲಿ ಅನೇಕ ಕೋನಗಳಿಂದ ಕೂಡಿದ ಗೋಪುರ ಭಾಗದಲ್ಲಿ, ಊಟದ ಹೋಟೆಲ್, ಪಿನಕಲ್ ಉಪಹಾರಮಂದಿರ, ವೀಕ್ಷಕ ಪ್ರಾಂಗಣಗಳು (Observation decks) ಗಿಫ್ಟ್ ಅಂಗಡಿಗಳು, ಪ್ರದರ್ಶನ ಮಳಿಗೆಗಳಿವೆ, ಜಲಪಾತ ವೀಕ್ಷಣೆಗೆ ಲಕ್ಷಾಂತರ ಮಂದಿ ಇಲ್ಲಿಗೆ ಧಾವಿಸುತ್ತಾರೆ.

**ವಿದ್ಯುದಾಗಾರ** : ೧೯೦೬ರಲ್ಲಿ ಕೆನಡ ಸರ್ಕಾರ ''ದಿ ಎಲೆಕ್ಟ್ರಿಕಲ್ ಡೆವೆಲಪ್‌ಮೆಂಟ್ ಕಂ.'' ಎಂಬ ಸಂಸ್ಥೆಯು

ವಿದ್ಯುದಾಗಾರವನ್ನು ಕಟ್ಟಿ ೧೩ ಜನರೇಟರ್‌ಗಳಿಂದ ೨೧,೯೦,೦೦೦ ಕಿ.ವ್ಯಾ. ವಿದ್ಯುತ್ ಉತ್ಪಾದಿಸುತ್ತಿದೆ. ನೀರನ್ನು ನಿಯಂತ್ರಿಸಲು ೨೨೦೦ ಉದ್ದದ ಅಣೆಕಟ್ಟು ಕಟ್ಟಿದ್ದಾರೆ. ಇದರ ಬಗ್ಗೆ ಅಮೆರಿಕ-ಕೆನಡ ಸರ್ಕಾರಗಳ ಮಧ್ಯೆ ಬೇಸಿಗೆಯ ಒಟ್ಟು ೫೪೮೦ ಕ್ಯೂ.ಮೀ. ಸೆಕೆಂಡ್ ಹರಿವಿನಲ್ಲಿ ೨೮೦೦ ಕ್ಯೂ.ಮೀ/ಸೆಕೆಂಡ್ ನೀರನ್ನು ಮಾತ್ರ ವಿದ್ಯುತ್ ಉತ್ಪಾದನೆಗೆ ಬಳಸಲು ಒಪ್ಪಂದವಾಗಿದೆ.

**ವಿರ್ಲ್‌ಪೂಲ್ (Whirl pool) :** ಜಲಪಾತದಿಂದ ೨-೩ ಕಿ.ಮೀ. ದೂರದಲ್ಲಿ ನಯಾಗರಾ ನದಿಯು ತನ್ನ ದಿಕ್ಕನ್ನು ಬದಲಾಯಿಸುತ್ತದೆ. ಪರಿಣಾಮವಾಗಿ ಅಲ್ಲಿ ಒಂದು ಸುಳಿಯ ಪೂಲ್ (Whirl pool) ಸೃಷ್ಟಿಯಾಗಿದೆ. ಇದು ಸುಮಾರು ೬೦ ಎಕರೆಯಷ್ಟು ವಿಶಾಲವಾಗಿದೆ. ಇದು ಒಂದು ಬೋಗುಣಿ ಯಾಕಾರದಲ್ಲಿದೆ. ಇದನ್ನು ವಿರ್ಲ್‌ಪೂಲ್ ಬೇಸಿನ್ ಎಂದು ಕರೆಯುತ್ತಾರೆ. ಸ್ಪಾನಿಷ್ ಏರ್‌ಕಾರ್ ಎಂಬ ಕೇಬಲ್ ಕಾರ್‌ನಲ್ಲಿ ಒಂದು ದಂಡೆಯಿಂದ ಇನ್ನೊಂದು ದಂಡೆಗೆ ಪ್ರಯಾಣ ಮಾಡಿ ಸುರುಳಿ ಸುರುಳಿಯಾಗಿ ದಿಕ್ಕು ಬದಲಿಸಿ ಹರಿಯನ್ನು ನದಿಯನ್ನು ನೋಡಬಹುದು. ಇದಕ್ಕಾಗಿ ಟಿಕೆಟ್ ಪಡೆಯಬೇಕಾಗುತ್ತದೆ. ಜಲಪಾತದಿಂದ ಈ ಸುಳಿಯ ಸರೋವರದವರೆಗೆ ನದಿಯ ಪಾತ್ರದಲ್ಲಿ ಅನೇಕ ಸಣ್ಣ ಸಣ್ಣ ಡ್ರಾಪ್ಸ್‌ಗಳಿದ್ದು ನೀರು ಅಲ್ಲಲ್ಲಿ ಧುಮುಕುತ್ತಾ ನೊರೆ ನೊರೆಯಾಗಿ ಹರಿಯುತ್ತದೆ. ಕೇಬಲ್‌ಕಾರ್‌ನಲ್ಲಿ ಕುಳಿತು ಸುಳಿಯ ಹೊಂಡವನ್ನು ದಾಟುತ್ತಾ ಈ ಸುಂದರ ದೃಶ್ಯವನ್ನು ಸವಿಯಬಹುದು. ಮೇಲೆ ಕೇಬಲ್‌ಕಾರ್‌ನಲ್ಲಿ ಪ್ರಯಾಣಿಸುವಾಗ ಅಪೂರ್ವ ದೃಶ್ಯಗಳ ಜೊತೆ ಭಯ, ಆತಂಕಗಳು ಉಂಟಾಗಿ ವಿಚಿತ್ರ ಅನುಭವವಾಗುತ್ತದೆ. ಕೆಳಗಿನ ಭಯಾನಕವಾದ ಸುಳಿಗಳಿಂದ ಕೂಡಿದ ನದಿ, ಹಸಿರು ತುಂಬಿದ ದಂಡೆಗಳು, ಸಾವಿರಾರು ವರ್ಷಗಳಿಂದ ನದಿಯ ಪಾತ್ರದಲ್ಲಿ ಸೃಷ್ಟಿಯಾಗಿರುವ ನಾನಾ ರೂಪಶಿಲೆಗಳು ಮನಸ್ಸಿಗೆ ಸಂತೋಷ ನೀಡುತ್ತವೆ. ಹಿಂತಿರುವಾಗ ಈ ಚೇತೋಹಾರಿ ದೃಶ್ಯಗಳು ಪುನರಾವರ್ತನೆಯಾಗುತ್ತವೆ.

**ರೈನ್‌ಬೊ ಸೇತುವೆ :** ಜಲಪಾತದಿಂದ ೫೫೦ ಅಡಿಗಳ ದೂರದಲ್ಲಿ ಈ ಸೇತುವೆಯನ್ನು ಕಟ್ಟಿ ಎರಡೂ ದೇಶಗಳ ಸಂಪರ್ಕಕ್ಕೆ ಅನುಕೂಲ ಕಲ್ಪಿಸಲಾಗಿದೆ. ೯೫೦ ಅಡಿಗಳ ಒಂದೇ ಕಣ್ಣಿನ (one span) ಸೇತುವೆಯಾಗಿದೆ. ಇದು ಎರಡೂ ದಂಡೆಗಳಲ್ಲಿ ಕಟ್ಟಿರುವ ಎರಡು ಕಂಬಗಳನ್ನು ಹೊಂದಿದೆ (Abutments) ಇಲ್ಲಿ ಇನ್ನೂ ಅನೇಕ ಸೇತುವೆಗಳನ್ನು ಈ ನದಿಗೆ ಅಡ್ಡಲಾಗಿ ಕಟ್ಟಿದ್ದಾರೆ.

**ಹೂವಿನ ಗಡಿಯಾರ :** (Floral Clock) ಈ ಗಡಿಯಾರವನ್ನು ೧೯೦೦೦ ಸಾವಿರ ಗಿಡಗಳನ್ನು ಬೆಳೆಸಿ ಸೃಷ್ಟಿಸಲಾಗಿದೆ. ಇದು ೪೦ ಅಡಿಗಳ ವ್ಯಾಸವನ್ನು ಹೊಂದಿದೆ. ನಯಾಗರ ಪಾರ್ಕ್ ಸಿಬ್ಬಂದಿ ಇದನ್ನು ನೋಡಿಕೊಳ್ಳುತ್ತಾರೆ.

**ಹಾರ್ಸ್‌ಷೂಫಾಲ್ ಇಂಕ್ಲೈನ್ :** ಇದು ಜಲಪಾತದಿಂದ ಮಿನೋಲ್ಟ ಗೋಪುರ ಪ್ರದೇಶಕ್ಕೆ ರಚಿಸಿರುವ ಇಳಿಜಾರು ರೈಲ್ವೆ. ಒಂದು ಗಂಟೆಗೆ ೧೬೦೦ ಜನರು ಪ್ರಯಾಣಮಾಡಬಹುದಾಗಿದೆ. ಎರಡು ಗಾಜಿನ ಬೋಗಿಗಳಲ್ಲಿ ೧೬೫ ಅಡಿ ದೂರವನ್ನು ೩೫° ಇಳಿಜಾರಿನಲ್ಲಿ ಸಂಚರಿಸುತ್ತದೆ. ಇದು ಪ್ರವಾಸಿಗಳಿಗೆ ಟೇಬಲ್‌ರಾಕ್ ಹೌಸ್‌ನಿಂದ ಮಿನೋಲ್ಟ ಗೋಪುರದವರೆಗೆ ಓಡಾಡಲು ಅನುಕೂಲವಾಗಿದೆ.

ಇತರ ಆಕರ್ಷಣೆಗಳೆಂದರೆ, ಬಟಿಂಗಿಕಲೆ ಗಾರ್ಡನ್ಸ್, ಓಕ್ಸ್ ಗಾರ್ಡನ್ ಥಿಯೇಟರ್, ಬಂಡೀಸ್ ಯುದ್ಧ ಸ್ಮಾರಕ,

ರೈಬೊ ಕ್ಯಾರಿಲಾನ್ ಗೋಪುರ, ನಯಾಗರ ಗ್ಲೆನ್, ನಯಾಗರದ ಹಳೆಕೋಟೆ, ನಯಾಗರ ಜಲಪಾತದ ಮ್ಯೂಸಿಯಂ, ಗ್ರೀನ್ ಹೌಸ್ ಗಿನ್ನಿಸ್‌ಮ್ಯೂಸಿಯಂ, ಬ್ರಾಕ್ಸ್‌ಮಾನ್ಯುಮೆಂಟ್, ರ್‍ಯೂಮರ್ಸ್ ಕ್ಲಬ್‌ವ್ಯಾಕ್ಸ್ ಮೂಸಿಯಂ, ಟಿಪ್ರೋಲಿ ಮಿನಿಯೇಟರ್ ಥಿಯೇಟರ್ ಮತ್ತು ಫನ್‌ಸೆಂಟರ್ ಮೊದಲಾದವು. ಸಮಯಾಭಾವದಿಂದ ನಾವು ಎಲ್ಲವನ್ನು ನೋಡಲಾಗಲಿಲ್ಲ.

ಒಟ್ಟಿನಲ್ಲಿ ನಯಾಗರ ಜಲಪಾತವು ಒಂದು ವಿಶ್ವವಿಖ್ಯಾತ ಸುಂದರ ಪ್ರವಾಸಿ ಕೇಂದ್ರ. ಇದೊಂದು ಅದ್ಭುತ ಸೌಂದರ್ಯದ ಪ್ರಕೃತಿಯ ಕೊಡುಗೆ. ನೋಡಲೇಬೇಕಾದ ಪ್ರವಾಸಿ ತಾಣ. ಅಮೆರಿಕದಲ್ಲಿ ಯಾವ ಪ್ರೇಕ್ಷಣೀಯ ಸ್ಥಳವನ್ನು ನೋಡದಿದ್ದರೂ ನಯಾಗರದಂತ ಅಪರೂಪದ ವಿಶ್ವಪ್ರಸಿದ್ಧ ಪ್ರಕೃತಿಯ ಸೌಂದರ್ಯವನ್ನು ಮಾತ್ರ ಅವಶ್ಯಕವಾಗಿ ನೋಡಬೇಕು. ಇಲ್ಲದಿದ್ದರೆ ಜೀವನದಲ್ಲಿ ಒಂದು ಅಪೂರ್ವ ಅವಕಾಶವನ್ನು ಕಳೆದುಕೊಂಡಂತಾಗುತ್ತದೆ. ಅಮೆರಿಕದಲ್ಲಿ ಮಾನವ ನಿರ್ಮಿತ, ಆಧುನಿಕತೆಯನ್ನು ಪ್ರತಿಬಿಂಬಿಸುವ, ಪ್ರಗತಿಯ ದ್ಯೋತಕವಾಗಿರುವ ಆಕರ್ಷಣೆಗಳು ಅಸಂಖ್ಯವಾಗಿವೆ. ಆದರೆ ಅವೆಲ್ಲವೂ ಪ್ರಕೃತಿಯ ಕೊಡುಗೆಗಳಾದ ನಯಾಗರಾ ಮತ್ತು ಗ್ರ್ಯಾಂಡ್ ಕ್ಯಾನಿಯನ್ಸ್‌ನಂತಹ ಸಹಜ ಸೌಂದರ್ಯದ ಪ್ರೇಕ್ಷಣೀಯ ಸ್ಥಳಗಳಿಗೆ ಸರಿಸಾಟಿ ಯಾಗಲಾರವು ಎಂಬುದು ನಮ್ಮ ಅನಿಸಿಕೆ.

❀





## ಡಾಬಸ್‌ಪೇಟೆಯಲ್ಲಿ ಶ್ರೀ ಸಿದ್ಧಲಿಂಗೇಶ್ವರ ಸಮುದಾಯ ಭವನದ ಉದ್ಘಾಟನೆ




ಸಮಾರಂಭದ ದಿವ್ಯಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ

ಸೆಪ್ಟೆಂಬರ್ ೮ರಂದು ಬೆಂಗಳೂರು ಗ್ರಾಮಾಂತರ ಜಿಲ್ಲೆ ನೆಲಮಂಗಲ ತಾಲ್ಲೂಕಿನ ಡಾಬಸ್‌ಪೇಟೆಯಲ್ಲಿ ಹಬ್ಬದ ವಾತಾವರಣ. ಶ್ರೀಮಠದ ಸಾವಿರಾರು ಜನ ಭಕ್ತರು, ಅಭಿಮಾನಿಗಳ ಸಮಾವೇಶ ಸಂದರ್ಭ. ಶ್ರೀಮಠದ ವತಿಯಿಂದ ನಿರ್ಮಾಣವಾಗಿರುವ ಶ್ರೀ ಸಿದ್ಧಲಿಂಗೇಶ್ವರ ಸಮುದಾಯ ಭವನದ ಉದ್ಘಾಟನಾ ಸಮಾರಂಭ. ಡಾಬಸ್‌ಪೇಟೆಯ ಸುತ್ತಮುತ್ತಲ ಪ್ರದೇಶದ ಜನರು ಮದುವೆ ಮುಂತಾದ ಮಂಗಳ ಕಾರ್ಯಗಳನ್ನು ಮಾಡಲು, ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಲು ಸಮುದಾಯ ಭವನದ ಅಗತ್ಯವನ್ನು ಮನಗೊಂಡ ಪರಮಪೂಜ್ಯ ಶ್ರೀ ಶ್ರೀಗಳವರು, ಈ ಪ್ರಾಂತ್ಯದ ಭಕ್ತರು, ಅಭಿಮಾನಿಗಳ ಭಕ್ತಿಪೂರ್ವಕವಾದ ಕೋರಿಕೆಗೆ ಸ್ಪಂದಿಸಿ ಸುಮಾರು ೫೦ ಲಕ್ಷ ರೂ.ಗಳ ವೆಚ್ಚದಲ್ಲಿ ಸಮುದಾಯ ಭವನದ ನಿರ್ಮಾಣವಾಗಲು ಅನುಗ್ರಹಿಸಿ ಈ ಭಾಗದ ಜನರಿಗೆ ಉತ್ತಮ ಸೌಲಭ್ಯವನ್ನು ಒದಗಿಸಿಕೊಟ್ಟಿರುವುದು ನಮ್ಮೆಲ್ಲರ ಪುಣ್ಯ ವಿಶೇಷ. ಬಹುದಿನಗಳ ಕನಸು ಪರಮಪೂಜ್ಯ ಶ್ರೀ ಶ್ರೀಗಳವರ ಆಶೀರ್ವಾದದಿಂದ ಕೈಗೊಂಡಿದಕ್ಕೆ ಸಮಾರಂಭದಲ್ಲಿ ಭಾಗವಹಿಸಿದವರೆಲ್ಲರ ಮುಖದಲ್ಲಿ ಸಂತೋಷ ಮಿಂಚುತ್ತಿತ್ತು.

ಸಮಾರಂಭಕ್ಕೆ ಆಗಮಿಸಿದ ಪರಮಪೂಜ್ಯ ಶ್ರೀ ಶ್ರೀಗಳವರು, ಸುತ್ತೂರು ವೀರಸಿಂಹಾಸನ ಸಂಸ್ಥಾನ ಮಠ ಪರಮಪೂಜ್ಯ

ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು, ಶ್ರೀ ದೇಗುಲ ಮಠದ ಪರಮಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರನ್ನು ಮಂಗಳ ವಾದ್ಯ, ಕಳಸ, ನಂದಿಧ್ವಜದೊಂದಿಗೆ ಮೆರವಣಿಗೆಯಲ್ಲಿ ಸಮಾರಂಭದ ವೇದಿಕೆಗೆ ಭಕ್ತಿ-ಗೌರವಗಳಿಂದ ಬರಮಾಡಿಕೊಳ್ಳಲಾಯಿತು.

ಸಮಾರಂಭ ಶ್ರೀ ನಂದೀಶ ಅವರ ಪ್ರಾರ್ಥನೆಯೊಂದಿಗೆ ಆರಂಭವಾಯಿತು. ಶ್ರೀಮಠದ ಆಡಳಿತಾಧಿಕಾರಿಗಳಾದ ಶ್ರೀ ಪಿ.ಎಸ್. ಪುಟ್ಟಶಂಕರಯ್ಯ ಅವರು ಸ್ವಾಗತ ಕೋರಿದರು. ಶ್ರೀಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ತಮ್ಮ ಪ್ರಾಸ್ತಾವಿಕ ನುಡಿಗಳಲ್ಲಿ ''ಪ್ರತಿಯೊಬ್ಬರೂ ಸರಳವಾದ ಜೀವನ ನಡೆಸುವಂತಾಗಬೇಕು. ಹಾಸಿಗೆ ಇದ್ದಷ್ಟು ಕಾಲನ್ನು ಚಾಚುವ ಬದುಕನ್ನು ರೂಪಿಸಿಕೊಳ್ಳಬೇಕು. ಆದ್ದರಿಂದ, ಆಡಂಬರದ ಮದುವೆಗಳಿಗೆ ಕಡಿವಾಣ ಹಾಕಿ ಸರಳವಾದ ಮದುವೆ ಮಾಡುವುದು ಇಂದು ಅಗತ್ಯವಾಗಿದೆ'' ಎಂದು ತಿಳಿಸಿದರು.

ಶ್ರೀ ಪಿ.ಎಸ್. ಪುಟ್ಟಶಂಕರಯ್ಯ ಅವರಿಂದ ಸ್ವಾಗತ

ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರಿಂದ ಪ್ರಾಸ್ತಾವಿಕ ನುಡಿ

### ಉದ್ಘಾಟನೆ

ಶಿಲಾನ್ಯಾಸದ ಅನಾವರಣ ಹಾಗೂ ಜ್ಯೋತಿ ಬೆಳಗಿಸುವುದರ ಮೂಲಕ ಶ್ರೀ ಸಿದ್ಧಲಿಂಗೇಶ್ವರ ಸಮುದಾಯ ಭವನವನ್ನು ಉದ್ಘಾಟಿಸಿದ ಸುತ್ತೂರು ವೀರಸಿಂಹಾಸನ ಮಠದ ಪರಮ ಪೂಜ್ಯ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ತಮ್ಮ ಉದ್ಘಾಟನಾ ಶುಭ ನುಡಿಗಳಲ್ಲಿ ''ಶ್ರೀ ಉದ್ದಾನ ಶಿವಯೋಗಿಗಳವರ ಜನ್ಮಭೂಮಿಯಲ್ಲಿ ಶ್ರೀ ಸಿದ್ಧಲಿಂಗೇಶ್ವರ ಸಮುದಾಯ ಭವನ ನಿರ್ಮಾಣವಾಗಿರುವುದು ನಿಮ್ಮೆಲ್ಲರ ಸೌಭಾಗ್ಯ. ಸಾರ್ವಜನಿಕ ಉದ್ದೇಶಗಳಿಗೆ ಬೇಕಾದ ಒಂದು ಸಮುದಾಯ ಭವನ ಪೂಜ್ಯ ಶ್ರೀ ಶ್ರೀಗಳವರ ಆಶೀರ್ವಾದದಿಂದ ನಿರ್ಮಾಣವಾಗಿದೆ. ಈ ಭಾಗದ ಜನರಿಗೆ ಶ್ರೀ ಸಿದ್ಧಗಂಗಾ ಕ್ಷೇತ್ರ ಆಧ್ಯಾತ್ಮಿಕ ತವರು ಮನೆಯಾಗಿದೆ. ಶ್ರೀ ಶ್ರೀಗಳವರು ಸಮಾಜಕ್ಕೆ ಸಲ್ಲಿಸುತ್ತಿರುವ ಸೇವೆ ಅನುಪಮವಾದುದು. ಶ್ರೀಮಠ ಈ ಭಾಗದ ಜನರಿಗೆ ಒಂದು ಅವಿಭಾಜ್ಯ ಅಂಗವಾಗಿದೆ. ಈ ವರ್ಷ ಏಪ್ರಿಲ್‌ನಲ್ಲಿ ಶ್ರೀಮಠದಲ್ಲಿ ನಡೆದ ಗುರುವಂದನಾ ಸಮಾರಂಭದಲ್ಲಿ ಕೇಂದ್ರ ರಕ್ಷಣಾ ಸಚಿವರಾದ ಶ್ರೀ ಜಾರ್ಜ್ ಫರ್ನಾಂಡೀಸ್





ಅವರು ಶ್ರೀಗಳವರ ಬಗ್ಗೆ ಅಭಿಮಾನದಿಂದ ಹೇಳಿದ ''ಗಾಂಧೀಜಿಯವರ ನಂತರ ಅವರ ಗುಣಗಳನ್ನು ಶ್ರೀಗಳವರಲ್ಲಿ ಕಾಣುತ್ತೇವೆ'' ಎಂಬ ಮಾತನ್ನು ಈ ಸಂದರ್ಭದಲ್ಲಿ ನೆನಪಿಸಿಕೊಂಡರು.

### ವೀರಶೈವ ಮಠಗಳು

ವೀರಶೈವ ಮಠಗಳು ಇಂದು ಅದ್ಭುತ ವಾದ ಕೆಲಸವನ್ನು ಮಾಡಿವೆ; ಮಾಡುತ್ತಿವೆ. ಈ ನಾಡಿನಲ್ಲಿ ಅನಕ್ಷರತೆ ಕಡಿಮೆಯಾಗಲು ಮಠಗಳು ಒಂದು ಕ್ರಾಂತಿಯನ್ನೇ ನಡೆಸಿರುವುದು ವ್ಯಕ್ತವಾಗುತ್ತದೆ.

'ಕರ್ನಾಟಕ ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ, ಸಾಮಾಜಿಕ ಹಾಗೂ ಶೈಕ್ಷಣಿಕವಾಗಿ ಇಡೀ ರಾಷ್ಟ್ರದಲ್ಲೇ ಎದ್ದು ಕಾಣುವಂತಾಗಲು ವೀರಶೈವ ಮಠಗಳೇ ಕಾರಣ. ಈ ಕೀರ್ತಿಗೆ ಶ್ರೀ ಸಿದ್ಧಗಂಗಾ ಮಠದ ಬಹುಮುಖ ಸೇವೆ ಅನನ್ಯವಾದುದು' ಎಂದು ತಿಳಿಸಿದರು.

'ನಂಬಲಿಕ್ಕೆ ಸಾಧ್ಯವಿಲ್ಲದಂತಹ ಕಾರ್ಯಯವನ್ನು ಶ್ರೀಮಠ ಮಾಡಿ ತೋರಿಸಿದೆ, ತೋರಿಸುತ್ತಿದೆ. ದಿನನಿತ್ಯ ೮೦೦೦ ವಿದ್ಯಾರ್ಥಿಗಳಿಗೆ ಜಾತಿ ಬೇಧವಿಲ್ಲದೆ ಆಶ್ರಯ ನೀಡಿ ಅನ್ನದಾಸೋಹ ಹಾಗೂ ಜ್ಞಾನ ದಾಸೋಹವನ್ನು ಮಾಡುತ್ತಿರುವುದು ಸಾಮಾನ್ಯವಾದ ವಿಷಯವಲ್ಲ, ಪೂಜ್ಯರಿಗೆ ಮಕ್ಕಳ ಬಗ್ಗೆ ಇರುವ ಪ್ರೀತಿ, ಆತ್ಮೀಯತೆ ಅನನ್ಯವಾದುದು' ಎಂದು ನುಡಿದರು.

''ಸಮಾಜದಲ್ಲಿ ಇಂದು ಅನೇಕ ಅನಿಷ್ಟ ಪದ್ಧತಿಗಳನ್ನು ಕಾಣುತ್ತೇವೆ. ಆದ್ದರಿಯಾಗಿ ಮದುವೆ ಮಾಡುವ ಹುಚ್ಚಿನಿಂದಾಗಿ ಅನೇಕ ಬಡ ಹಾಗೂ ಮಧ್ಯಮ ವರ್ಗದ ಕುಟುಂಬಗಳು ಬಲಿಯಾಗುತ್ತಿವೆ. ಈ ವಿಷಮ ವಾತಾವರಣದಿಂದ ಹೊರಗೆ ಬರಬೇಕು. ವಿದ್ಯಾವಂತರಾದವರು ವರದಕ್ಷಿಣೆಗೆ ಹೆಚ್ಚು ಆಸೆಪಡುತ್ತಿದ್ದಾರೆ. ಅದು ಹೋಗಬೇಕು. ಮನುಷ್ಯ ಜ್ಞಾನ ಸಂಪಾದನೆ ಮಾಡುವುದು ಸಮಾಜದಲ್ಲಿರುವ ಮೂಢನಂಬಿಕೆ, ಮೌಢ್ಯ, ಅನಿಷ್ಟಗಳನ್ನು ಹೋಗಲಾಡಿಸಲು. ಅಂತವರು ನಿಜವಾದ ವಿದ್ಯಾವಂತರೆನಿಸುತ್ತಾರೆ'' ಎಂದು ತಿಳಿಸಿದ ಶ್ರೀ ಶ್ರೀಗಳವರು ''ಮನುಷ್ಯನಲ್ಲಿ ಜಾಗೃತಿಯನ್ನು ಉಂಟುಮಾಡುವ ಶಕ್ತಿ ಧರ್ಮಕ್ಕಿದೆ. ಧರ್ಮದಿಂದ ಮಾತ್ರ ಈ ಕೆಲಸ ಸಾಧ್ಯ. ಜನರು ಸಂಕುಚಿತ ಭಾವನೆಯಿಂದ ಹೊರಬಂದು ಧರ್ಮದ ಹಾದಿಯಲ್ಲಿ ಬದುಕುವುದನ್ನು ಕಲಿಯಬೇಕು'' ಎಂದು ಕರೆನೀಡಿದರು.

''ತೊಂಬತ್ತೆದರ ವಯಸ್ಸಿನಲ್ಲಿಯೂ ಕ್ರಿಯಾತ್ಮಕವಾಗಿ ಒಂದೊಂದು ನಿಮಿಷವನ್ನು ಅರ್ಥಪೂರ್ಣವಾಗಿ ಸದುಪಯೋಗ

ಪೂಜ್ಯ ಜಗದ್ಗುರು ಶ್ರೀ ಶ್ರೀ ಸುತ್ತೂರು ಶ್ರೀ ಶ್ರೀಗಳವರಿಂದ ಅನುಗ್ರಹ ಭಾಷಣ

ಮೆರವಣಿಗೆಯಲ್ಲಿ ಪೂಜ್ಯ ಶ್ರೀ ಶ್ರೀಗಳವರನ್ನು ಬರಮಾಡಿಕೊಳ್ಳುತ್ತಿರುವುದು

ಶ್ರೀ ಜಿ.ಎಸ್. ಬಸವರಾಜು ಅವರಿಂದ ಭಾಷಣ

ಪಡಿಸಿಕೊಳ್ಳುತ್ತಿರುವುದು ಸಮಾಜದ ಭಾಗ್ಯ. ಅವರ ಆದರ್ಶ. ಆಶೀರ್ವಚನದ ದಿವ್ಯ ಬೆಳಕಿನಲ್ಲಿ ನಮ್ಮ ಜೀವನವನ್ನು ರೂಪಿಸಿಕೊಂಡು ನಡೆದಾಗ ಜೀವನ ಸಾರ್ಥಕವಾಗುತ್ತದೆ' ಎಂದು ನುಡಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ತುಮಕೂರು ಲೋಕಸಭಾ ಸದಸ್ಯರಾದ ಶ್ರೀ ಜಿ.ಎಸ್. ಬಸವರಾಜ್ ಅವರು ಈ ಸಂದರ್ಭದಲ್ಲಿ ಮಾತನಾಡುತ್ತಾ ''ಈ ಭಾಗದ ಜನರಿಗೆ ಈಗ ಉದ್ಘಾಟನೆಗೊಂಡಿರುವ ಶ್ರೀ ಸಿದ್ಧಲಿಂಗೇಶ್ವರ ಸಮುದಾಯ ಭವನ ವರದಾನವಾಗಿದೆ. ಗ್ರಾಮೀಣ ಜನರಿಗೆ ತುಂಬಾ ಉಪಯುಕ್ತವಾಗುವ ಈ ಸಮುದಾಯ ಭವನದ ಅಗತ್ಯತೆ ಇತ್ತು. ಈ ಕೊರತೆಯನ್ನು ಇಂದು ಶ್ರೀ ಶ್ರೀಗಳವರು ನಿವಾರಿಸಿದ್ದಾರೆ' ಎಂಬ ಅಭಿಪ್ರಾಯಪಟ್ಟರು.

### *ಗಣಪತಿ ದೇವಾಲಯದ ಉದ್ಘಾಟನೆ*

ಸಮುದಾಯ ಭವನದ ಆವರಣದಲ್ಲಿ ನಿರ್ಮಾಣವಾಗಿರುವ ಗಣಪತಿ ದೇವಾಲಯವನ್ನು ಕನಕಪುರ ಶ್ರೀ ದೇಗುಲಮಠದ ಪರಮಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರು ಉದ್ಘಾಟಿಸಿ, ತಮ್ಮ ಆಶೀರ್ವಚನದಲ್ಲಿ ''ಬಡಜನರ ಅನುಕೂಲಕ್ಕಾಗಿ ಈ ಸಮುದಾಯ ಭವನವನ್ನು ಶ್ರೀ ಶ್ರೀಗಳವರು ನಿರ್ಮಾಣ ಮಾಡಿರುವುದು ಈ ಭಾಗದ ಜನರಿಗೆ ತುಂಬಾ ಅನುಕೂಲವಾಗಿದೆ. ದೇವಾಲಯ ಚಿಕ್ಕದಾದರೂ ಚೊಕ್ಕದಾಗಿ ಸುಂದರವಾಗಿದೆ. ಜನತೆ ಇದರ ಉಪಯೋಗವನ್ನು ಪಡೆದುಕೊಳ್ಳುವಂತಾಗಲಿ. ಪರಮಪೂಜ್ಯ ಶ್ರೀ ಶ್ರೀಗಳವರ ಸೇವೆ ಅನುಪಮವಾದುದು. ಅವರ ದಿವ್ಯಾಶೀರ್ವಾದ ನಮ್ಮೆಲ್ಲರ ಮೇಲಿರಲಿ' ಎಂದು ಆಶಿಸಿದರು.

ಬೇಲಿಮಠದ ಶಿವಾನುಭವ ಚರಮೂರ್ತಿ ಶ್ರೀ ಶ್ರೀ ಶಿವರುದ್ರ ಮಹಾಸ್ವಾಮಿಗಳು ಈ ಸಂದರ್ಭದಲ್ಲಿ ಶುಭನುಡಿಗಳನ್ನು ನುಡಿದರು.

ಸಮಾರಂಭದ ದಿವ್ಯ ಸಾನ್ನಿಧ್ಯವಹಿಸಿದ್ದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಮ್ಮ ದಿವ್ಯ ಸಂದೇಶದಲ್ಲಿ ''ಈಗ ಸಮಾಜದಲ್ಲಿ ತೀವ್ರತರವಾದ ಬದಲಾವಣೆಯಾಗುತ್ತಿದೆ. ಧರ್ಮದ ಮುಖ್ಯ ಉದ್ದೇಶ ಪುರಸ್ಸರ ಪ್ರೀತಿ ವಿಶ್ವಾಸ, ಸೌಹಾರ್ದ ವಾತಾವರಣ. ನಾಗರಿಕತೆ ಅರ್ಥವಿಲ್ಲದಂತಾಗಿದೆ. ಯಾರು ಸುಸಂಸ್ಕೃತರಾಗಿದ್ದಾರೋ ಅವರೆ ನಾಗರಿಕರು. ಜೀವನ ಮೌಲ್ಯಗಳು ಕುಸಿದು ಬೀಳುತ್ತಿವೆ. ಧರ್ಮಬುದ್ಧಿ ಜಾಗೃತವಾಗಬೇಕು,'' ಎಂದು ತಿಳಿಸಿದರು.

### *ಮಠಗಳ ಸೇವೆ*

ಮಠಗಳ ಕಾರ್ಯವನ್ನು ಶ್ಲಾಘಿಸಿದ ಶ್ರೀ ಶ್ರೀಗಳವರು ಕರ್ನಾಟಕದಲ್ಲಿ ಬಹಳ ವೀರಶೈವ ಮಠಗಳಿವೆ. ಮಠಗಳು ಮಾಡುವಂತಹ ಕೆಲಸವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬೇಕು. ಪ್ರತಿಯೊಂದು ಮಠವೂ ಅಪೂರ್ವವಾದ ಸೇವೆಯನ್ನು ಮಾಡುತ್ತಿವೆ. ಮಠಗಳು ಸಾರ್ಥಕ ಸೇವೆ ಮಾಡದೆ ಹೋದರೆ ಸಮಾಜ ಉದ್ಧಾರವಾಗುವುದಿಲ್ಲ. ವೀರಶೈವ ಧರ್ಮ ವಿಶಾಲವಾದ ತಳಹದಿಯ ಮೇಲೆ ನಿಂತಿದೆ. ಮಠಗಳು ಮಾಡಿದ ಸೇವೆಯ ಫಲವನ್ನು ಇಂದು ಸಮಾಜದಲ್ಲಿ ಕಾಣುತ್ತಿದ್ದೇವೆ. ಶಿಕ್ಷಣ ಹಾಗೂ ನ್ಯಾಯಾಂಗ ಖಾತೆಗಳು ಏನು ಕೆಲಸ ಮಾಡುತ್ತಿವೆಯೋ ಆ ಕೆಲಸಗಳನ್ನು ಮಠಗಳು ತುಂಬಾ ಸಾರ್ಥಕವಾಗುವ ರೀತಿಯಲ್ಲಿ ಮಾಡುತ್ತಿವೆ'' ಎಂದು ನುಡಿದ ಶ್ರೀ ಶ್ರೀಗಳವರು 'ಗಾಂಧೀಜಿಯವರು ಇದ್ದಿದ್ದರೆ ಈ ರೀತಿ





ಪ್ರೇಕ್ಷಕರು

ಸಮಾಜದಲ್ಲಿ ಮೇಲುಕೀಳು, ಅಸಮಾನತೆ ಉಂಟಾಗುತ್ತಿರಲಿಲ್ಲ' ಎಂದು ನೊಂದು ನುಡಿದರು.

ಕಾಯಕ ತತ್ವವನ್ನು ಜೀವನದಲ್ಲಿ ಶ್ರದ್ಧಾಪೂರ್ವಕವಾಗಿ ಅಳವಡಿಸಿಕೊಳ್ಳಬೇಕು. ಸ್ವಾವಲಂಬಿಗಳಾಗಬೇಕು. ಪ್ರತಿಯೊಬ್ಬರು ಶ್ರಮಪಟ್ಟು ದುಡಿದು ಗಳಿಸಿ ತಿನ್ನುವಂತಾಗಬೇಕು. ಇಂದು ಜನಸಂಖ್ಯೆ ಜಾಸ್ತಿಯಾಗುತ್ತಿದ್ದು ದುಡಿಮೆ ಕಡಿಮೆಯಾಗುತ್ತಿದೆ. ಸ್ವಾರ್ಥಬಿಟ್ಟು ಧರ್ಮವನ್ನು ಕಾಪಾಡಬೇಕಾಗಿರುವುದು ಪ್ರತಿಯೊಬ್ಬರ ಆದ್ಯ ಕರ್ತವ್ಯವಾಗಬೇಕು, ಜನರು ಪ್ರಜ್ಞಾವಂತರಾಗಬೇಕು' ಎಂದು ನುಡಿದ ಪೂಜ್ಯ ಶ್ರೀ ಶ್ರೀಗಳವರು ಮಾದೇನಹಳ್ಳಿ ಬಂಧುಗಳು ದಾನವಾಗಿ ನೀಡಿದ ಈ ಜಾಗದಲ್ಲಿ ಸಮುದಾಯ ಭವನ ನಿರ್ಮಾಣವಾಗಿದೆ. ಈ ಸಮುದಾಯ ಭವನ ಸಾಂಸ್ಕೃತಿಕ ಕೇಂದ್ರವಾಗಿ ಬೆಳೆಯಬೇಕು' ಎಂದು ಆಶಿಸಿದರು.

ಕಾರ್ಯಕ್ರಮವನ್ನು ಸಿದ್ಧಗಂಗಾ ಮಾಸಪತ್ರಿಕೆಯ ಸಂಪಾದಕರಾದ ಪ್ರೊ. ಹೆಚ್.ವಿ. ವೀರಭದ್ರಯ್ಯ ಅವರು ನಿರೂಪಿಸಿದರು. ಕೊನೆಯಲ್ಲಿ ಶ್ರೀ ಪಿ.ಎನ್. ಚಂದ್ರಶೇಖರ್ ಅವರು ವಂದಿಸಿದರು.

ವರದಿ : ಎಚ್.ಎಸ್. ಸಿದ್ಧಗಂಗಪ್ಪ

*ಶ್ರೀ ಸಿದ್ಧಲಿಂಗೇಶ್ವರ ಸಮುದಾಯ ಭವನದಲ್ಲಿರುವ ಸೌಲಭ್ಯಗಳು*

| | |
|---|---|
| ಸಭಾಮಂಟಪ | ೧ |
| ಪ್ರಸಾದ ಗೃಹ | ೧ |
| ಪಾಕ ಗೃಹ | ೧ |
| ಸಾಮಗ್ರಿಗಳ ಶೇಖರಣೆ ಕೊಠಡಿ | ೧ |
| ಕೊಠಡಿಗಳು | ೧೦ |
| ಸ್ನಾನ ಗೃಹಗಳು | ೧೦ |
| ಶೌಚ ಗೃಹಗಳು | ೧೦ |
| ಜನರೇಟರ್ ಕೊಠಡಿ | ೧ |
| ಗ್ಯಾಸ್ ಕೊಠಡಿ | ೧ |

**ಶ್ರೀವಾಣಿ**

ವಿದ್ಯಾರ್ಥಿಗಳು ಕೆಟ್ಟರೆ, ತಪ್ಪು ಹಾದಿ
ಹಿಡಿದರೆ ತಂದೆ-ತಾಯಂದಿರು ಬೆವರು ಸುರಿಸಿ
ದುಡಿದ ಹಣದ ವ್ಯಯ, ಜೊತೆಗೆ ನಿಮ್ಮ
ಅಮೂಲ್ಯವಾದ ಕಾಲದ ವ್ಯಯ.

## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೨೦೦. | **ಶ್ರೀ ಗುರುರಾಜ್ ಗುಡಿ**<br>**ಬಿನ್ ಶ್ರೀಪತಿರಾವ್ ಗುಡಿ**<br>ನಂ. ೭೬, ೧ನೇ ಮುಖ್ಯರಸ್ತೆ<br>ಬಿ.ಟಿ.ಎಂ. ಬಡಾವಣೆ,<br>ಬೆಂಗಳೂರು – ೫೬೦ ೦೭೬. | ೨,೧೧೧.೦೦ |
| ೨೦೧. | **ಲಿಂ. ಚಿಕ್ಕಸಿದ್ದಪ್ಪ, ಶ್ರೀಮತಿ ಗೌರಮ್ಮ**<br>**ಮತ್ತು ಮಕ್ಕಳು**<br>ನೇರಳಾಪುರ,<br>ಸಾಸಲು ಅಂಚೆ, ತುಮಕೂರು ತಾಲ್ಲೂಕು | ೧,೦೦೧.೦೦<br>(೧ನೇ ಕಂತು) |
| ೨೦೨. | **ಶ್ರೀ ಕೆ.ವಿ. ವೀರಭದ್ರಯ್ಯ**<br>ನಂ. ಎ೩, ನ್ಯೂಕಾಂತರಾಜ್ ಅರಸ್ ರಸ್ತೆ<br>ಕುವೆಂಪುನಗರ,<br>ಮೈಸೂರು – ೫೭೦ ೦೨೩.<br>**(ಲಿಂ. ಕೆ.ವಿ. ನಾಗಮ್ಮ ಇವರ ಸ್ಮರಣಾರ್ಥ)** | ೧,೦೦,೦೦೧.೦೦ |
| ೨೦೩. | **ಶ್ರೀ ಕೆ. ಶಿವಪ್ರಸಾದ್ ಬಿನ್**<br>**ಶ್ರೀ ಚಿಕ್ಕಕೆಂಪಣ್ಣ**<br>ಕಂಭತ್ತನಹಳ್ಳಿ ಅಂಚೆ,<br>ತುಮಕೂರು ತಾಲ್ಲೂಕು. | ೫,೦೦೦.೦೦ |
| ೨೦೪. | **ಶ್ರೀಮತಿ ಹೊನ್ನಮ್ಮ ಕೋಂ**<br>**ಹೆಚ್.ಎನ್. ಸದಾಶಿವಯ್ಯ**<br>ಹುಲಿಕುಂಟೆ ಅಟ್ ಪೋಸ್ಟ್,<br>ದೊಡ್ಡಬಳ್ಳಾಪುರ ತಾಲ್ಲೂಕು.<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೩,೦೦೧.೦೦<br>(೨ನೇ ಕಂತು) |
| ೨೦೫. | **ಶ್ರೀ ಕೋರಿಸಿದ್ದೇಶ್ವರ ಸಂಸ್ಥಾನ ಮಠ**<br>ನಾಲವಾರ, ಚಿತ್ತಾಪುರ ತಾಲ್ಲೂಕು<br>ಗುಲ್ಬರ್ಗಾ ಜಿಲ್ಲೆ. | ೫,೦೦೧.೦೦ |
| ೨೦೬. | **ಶ್ರೀ ಕೃಷ್ಣರಾಜು**<br>ಸಿ-೩೯, ೧೩ನೇ 'ಎ' ಕ್ರಾಸ್,<br>೮ನೇ ಮೈನ್, ಬಿ.ಟಿ.ಎಂ. ೨ನೇ ಸ್ಟೇಜ್<br>ಎನ್.ಎಸ್. ಪಾಳ್ಯ,<br>ಬೆಂಗಳೂರೂ – ೫೬೦ ೦೭೬. | ೨,೧೧೧.೦೦ |
| ೨೦೭. | **ಶ್ರೀ ಪಿ.ಎನ್. ಲಿಂಗಪ್ಪ**<br>ನಂ. ೨೮/೧೯, ೧೯ನೇ ಮುಖ್ಯರಸ್ತೆ,<br>ಎಂ.ಸಿ. ಲೇಔಟ್, ವಿಜಯನಗರ,<br>ಬೆಂಗಳೂರು – ೫೬೦ ೦೪೦. | ೨,೦೦೧.೦೦ |
| ೨೦೮. | **ಶ್ರೀ ಹೆಚ್. ದೊಡ್ಡಣ್ಣ**<br>**ಕೇರಾಫ್ ಯು. ಶಂಕರಾನಂದಯ್ಯ,**<br>ಹೊಸಹಳ್ಳಿ, ಪಾವಗಡ ತಾಲ್ಲೂಕು.<br>ತುಮಕೂರು. | ೧,೦೦೧.೦೦<br>(೧ನೇ ಕಂತು) |
| ೨೦೯. | **ಶ್ರೀ ಎಸ್.ಕೆ. ಮಲ್ಲಿಕಾರ್ಜುನ**<br>**ಮತ್ತು ಶ್ರೀಮತಿ ದಾಕ್ಷಾಯಿಣಿ**<br>ನಂ. ೬೦೨, ೭ೀ ಮುಖ್ಯರಸ್ತೆ,<br>ವಿಜಯನಗರ, ಬೆಂಗಳೂರು – ೪೦. | ೧,೦೦೧.೦೦<br>(೨ನೇ ಕಂತು) |
| ೨೧೦. | **ಶ್ರೀ ಯಜಮಾನ್ ಚಿಕ್ಕವೀರಪ್ಪ**<br>ರಘುವನಹಳ್ಳಿ,<br>ದೊಡ್ಡಕಲ್ಲಸಂದ್ರ ಅಂಚೆ,<br>ಬೆಂಗಳೂರು – ೫೬೦ ೦೬೨. | ೧,೦೦೧.೦೦<br>(೨ನೇ ಕಂತು) |
| ೨೧೧. | **ಶ್ರೀ ಕೆ.ಪಿ. ಸಿದ್ದಗಂಗಯ್ಯ ಮತ್ತು ಮಕ್ಕಳು**<br>ಕದರನಹಳ್ಳಿ, ಲಕ್ಷ್ಮೀಪುರ ಅಂಚೆ,<br>ಬೆಂಗಳೂರು ಉತ್ತರ ತಾಲ್ಲೂಕು. | ೨,೦೨೨.೦೦ |
| ೨೧೨. | **ಶ್ರೀ ಬಿ. ಬಸವರಾಧ್ಯ**<br>ನಿವೃತ್ತ ಶಿಕ್ಷಕರು,<br>ಬಂಡೇಮಠ, ಬಾನವಾಡಿ ಅಂಚೆ,<br>ಮಾಗಡಿ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೮.೦೦<br>(೧ನೇ ಕಂತು) |
| ೨೧೩. | **ಶ್ರೀಮತಿ ನೀಲಮ್ಮ ಮತ್ತು**<br>**ಶ್ರೀ ಬಿ. ಬಸವರಾಧ್ಯ**<br>ನಿವೃತ್ತ ಶಿಕ್ಷಕರು,<br>ಬಂಡೇಮಠ, ಬಾನವಾಡಿ ಅಂಚೆ<br>ಮಾಗಡಿ ತಾಲ್ಲೂಕು. | ೧,೦೦೮.೦೦<br>(೧ನೇ ಕಂತು) |
| ೨೧೪. | **ಶ್ರೀ ಜಿ. ಪರಮೇಶ್ವರಪ್ಪ ಬಿನ್**<br>**ಲಿಂ. ಶ್ರೀ ಗಂಗಪ್ಪ**<br>ನಂ. ೮, 'ಶಿವಕುಮಾರಕೃಪ'<br>೧೦೦ ಅಡಿ ರಸ್ತೆ, ಬನಶಂಕರಿ ೩ನೇ ಸ್ಟೇಜ್<br>ಹೆಚ್.ಎಸ್.ಕೆ. ಲೇ ಔಟ್,<br>ಬೆಂಗಳೂರು – ೫೬ ೦೮೫. | ೩,೦೦೧.೦೦ |
| ೨೧೫. | **ಶ್ರೀ ಕೆ.ಆರ್. ಶಂಕರಪ್ಪ ಬಿನ್ ರಂಗಪ್ಪ**<br>ನಿವೃತ್ತ ಹೆಲ್ತ್ ಇನ್ಸ್‌ಪೆಕ್ಟರ್,<br>ಕೋಡಿಹಳ್ಳಿ, ತೋಟದಮನೆ,<br>ಕೆಸ್ತೂರು ಅಂಚೆ,<br>ತುಮಕೂರು ತಾಲ್ಲೂಕು | ೧,೦೦೧.೦೦<br>(೧ನೇ ಕಂತು) |





| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೨೧೬. | **ಶ್ರೀ ಜಿ.ಎಲ್. ಚಂದ್ರಶೇಖರಯ್ಯ**<br>ದೈಹಿಕ ಶಿಕ್ಷಣ ಶಿಕ್ಷಕರು,<br>ಶ್ರೀ ಬಸವೇಶ್ವರ ಶಿಕ್ಷಕರ ತರಬೇತಿ ಸಂಸ್ಥೆ,<br>ಶ್ರೀ ಸಿದ್ಧಗಂಗಾ ಮಠ,<br>ತುಮಕೂರು – ೫೭೨ ೧೦೪. | ೨,೦೦೧.೦೦ |
| ೨೧೭. | **ಶ್ರೀ ಟಿ. ಗಂಗಣ್ಣ**<br>ನಿವೃತ್ತ ಶಿಕ್ಷಕರು,<br>ತಿಪ್ಪೂರುಪಾಳ್ಯ, ತಿಪ್ಪೂರು ಅಂಚೆ,<br>ಗುಬ್ಬಿ ತಾಲ್ಲೂಕು. | ೮,೦೮೦.೦೦ |
| ೨೧೮. | **ಶ್ರೀ ಬಿ. ಗಾಂಧಿ**<br>ನಂ. ೫೪೫, ೧೧ನೇ ಮೈನ್, 'ಎ' ಕ್ರಾಸ್<br>ಯಲಹಂಕ ಸ್ಯಾಟಲೈಟ್ ಹೌಸ್<br>ಬೆಂಗಳೂರು – ೫೬೦ ೦೬೪. | ೫,೦೦೦.೦೦ |
| ೨೧೯. | **ಶ್ರೀ ಟಿ. ಯಂಕಯ್ಯಶೆಟ್ಟಿ**<br>ಶ್ರೀ ಸಿದ್ಧಲಿಂಗೇಶ್ವರ ಮೆಡಿಕಲ್ ಸ್ಟೋರ್<br>ಬ್ಯಾಗವಾಲ್, ಮಾನ್ವಿ ತಾಲ್ಲೂಕು,<br>ರಾಯಚೂರು ಜಿಲ್ಲೆ. | ೨,೦೦೧.೦೦ |
| ೨೨೦. | **ಶ್ರೀ ಲಕ್ಷ್ಮೀಪತಿ ಪಾಟೀಲ್**<br>ದೊಡ್ಡಮರಡಿ, ಮಲ್ಲದಗುಡ್ಡ ಅಂಚೆ,<br>ಮಾನ್ವಿ ತಾಲ್ಲೂಕು,<br>ರಾಯಚೂರು ಜಿಲ್ಲೆ. | ೨,೦೧೧.೦೦ |
| ೨೨೧. | **ಡಾ. ಎಸ್.ಎಸ್. ಹಿರೇಮಠ್**<br>ಮೆಡಿಕಲ್ ಆಫೀಸರ್,<br>ನಂ. ೮೦, "ಶಿವಕುಸುಮ"<br>೧ನೇ ಸ್ಟೇಜ್, ೨ನೇ ಬ್ಲಾಕ್,<br>ವಿನೋಭನಗರ,<br>ಶಿವಮೊಗ್ಗ – ೫೭೭೨೦೪. | ೨,೦೦೧.೦೦ |
| ೨೨೨. | **ಶ್ರೀ ಎಸ್. ಅಶೋಕ್**<br>ಕೇರಾಫ್ ಎಸ್. ಶಾಂತಕುಮಾರಿ<br>ಸೀನಿಯರ್ ಸ್ಟೆನೋಗ್ರಾಫರ್,<br>ಇಂಡಿಯನ್ ಇನ್ಸಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್<br>ಬೆಂಗಳೂರು | ೧,೦೦೦.೦೦<br>(೨ನೇ ಕಂತು) |
| ೨೨೩. | **ಶ್ರೀಮತಿ ಹೆಚ್.ಎಸ್. ಸಿದ್ದಗಂಗಮ್ಮ**<br>ಮುಖ್ಯಸ್ಥರು, ಸಮಾಜಶಾಸ್ತ್ರ ವಿಭಾಗ<br>ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು,<br>ತುಮಕೂರು – ೫೭೨೧೦೨. | ೪,೦೦೨.೦೦ |
| ೨೨೪. | **ಶ್ರೀ ಸಿದ್ದಾರ್ಥ**<br>ಸನ್ ಆಫ್ ಎಂ.ಕೆ. ತಿಪ್ಪಸ್ವಾಮಿ<br>ನಂ. ೧೪, ಅಕ್ಷಯ,<br>ಕಾಲನಗರ ಹೌಸಿಂಗ್ ಸೊಸೈಟಿ,<br>ಗುಲ್‌ಮೊಹರ್ ರಸ್ತೆ ಸವದತ್ತಿ<br>ಅಹಮದಾನಗರ, ಮಹಾರಾಷ್ಟ್ರ. | ೨,೦೦೦.೦೦ |
| ೨೨೫. | **ಶ್ರೀಮತಿ ಹೆಚ್.ಪಿ. ಅನಸೂಯ ಪ್ರಸಾದ್**<br>**ಕೇರಾಫ್ ಎಚ್.ಆರ್. ಪ್ರಸಾದ್,**<br>ಕಾಫಿ ಪ್ಲಾಂಟರ್ಸ್,<br>ಅನುಪಮ ಎಸ್ಟೇಟ್, ಆಲಸೂಲಿಗಿ ಪೋಸ್ಟ್<br>ಸಕಲೇಶಪುರ ತಾಲ್ಲೂಕು – ೫೭೩೧೩೪. | ೧,೦೦೦.೦೦<br>(೨ನೇ ಕಂತು) |
| ೨೨೬. | **ಶ್ರೀ ಕೆ. ಸಿದ್ದಲಿಂಗಯ್ಯ**<br>ಕೆಂಬಾಳು ಅಟ್ ಅಂಡ್ ಪೋಸ್ಟ್<br>ಹೆಬ್ಬೂರು ಹೋಬಳಿ,<br>ತುಮಕೂರು ತಾಲ್ಲೂಕು<br>ತುಮಕೂರು ಜಿಲ್ಲೆ – ೫೭೨೧೨೦. | ೧,೧೦೧.೦೦ |
| ೨೨೭. | **ಶ್ರೀ ರಂಗಣ್ಣ**<br>ಹನುಮಂತನಹಳ್ಳಿ, ಬಸವನಹಳ್ಳಿ ಪೋಸ್ಟ್<br>ಅಮರಾಪುರ ಮಂಡಳ,<br>ಮಡಕಶಿರಾ ತಾಲ್ಲೂಕು,<br>ಅನಂತಪುರ ಜಿಲ್ಲೆ. | ೧,೦೦೦.೦೦<br>(೨ನೇ ಕಂತು) |
| ೨೨೮. | **ಅಧ್ಯಕ್ಷರು**<br>ಶ್ರೀ ಸಿದ್ಧಲಿಂಗೇಶ್ವರ ರೆಸಿಡೆನ್ಸಿಯಲ್ ಪ್ರೌಢಶಾಲೆ<br>ಉಪಾಧ್ಯಾಯರ ಸಂಘ,<br>ಶ್ರೀ ಸಿದ್ಧಗಂಗಾ ಮಠ,<br>ತುಮಕೂರು ತಾಲ್ಲೂಕು. | ೫,೦೦೦.೦೦ |
| ೨೨೯. | **Dr. Basavarj Dallas**<br>Texas United States<br>of America and<br>Dr. Majula –do– | ೫,೦೦೧.೦೦ |
| ೨೩೦. | **ಶ್ರೀ ಎನ್. ಹೊನ್ನಲಿಂಗಯ್ಯ**<br>ಶ್ರೀ ವೀರಭದ್ರಸ್ವಾಮಿ ನಿಲಯ,<br>೧೦ನೇ ಎ ಕ್ರಾಸ್, ಗಂಗೋತ್ರಿ ರಸ್ತೆ<br>ಗಂಗೋತ್ರಿ ನಗರ, ಎಸ್.ಐ.ಟಿ. ಬಡಾವಣೆ<br>ತುಮಕೂರು. | ೨,೧೦೧.೦೦ |

*(ಮುಂದುವರಿಯುತ್ತದೆ)*

# ರೋಗಿಗಳ ಸೇವೆಯೇ ದೇವರಸೇವೆ




ಪರಮಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರಿಂದ ಆಶೀರ್ವಚನ

ಅದೊಂದು ಸ್ಮರಣೀಯ ಸಮಾರಂಭ. ಬೆಂಗಳೂರು ರಾಜಾಜಿನಗರದ ಎರಡನೇ ಬ್ಲಾಕಿಗೆ ಸೇರಿದ ವೆಸ್ಟ್ ಆಫ್ ಕಾಡ್‌ರೋಡ್‌ನಲ್ಲಿ ನೂತನವಾಗಿ ಪ್ರಾರಂಭವಾದ ''ಸಿಟಿ ಆಸ್ಪತ್ರೆ''ಯ ಆವರಣದಲ್ಲಿ ಸಮಾವೇಶಗೊಂಡಿದ್ದ ಸಾವಿರಾರು ಮಂದಿಯಿದ್ದ ದೃಶ್ಯ. ಸುಸಜ್ಜಿತವಾಗಿ ಅಲಂಕೃತಗೊಂಡ ವೇದಿಕೆ. ಸಮವಸ್ತ್ರಧಾರಿಗಳಾದ ವೈದ್ಯ ಬಂಧುಗಳು. ಶಿಸ್ತು ಸಂಯಮದ ಸನ್ನಿವೇಶ. ಎಲ್ಲರ ಮುಖದಲ್ಲಿ ಉಲ್ಲಾಸ. ಬಂದವರೆಲ್ಲರಿಗೆ ಪ್ರೀತಿಯ ಉಪಚಾರ.

ನಿರಂಜನ ಶುದ್ಧ ಕಾಯಕಯೋಗಿ, ದಾಸೋಹ ಸಾರ್ವಭೌಮ, ನಡೆದಾಡುವ ದೇವರೆಂದೇ ಹೆಸರಾದ ಶ್ರೀ ಸಿದ್ಧಗಂಗಾ ಮಠದ ತಪೋಮೂರ್ತಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಆಶೀರ್ವಚನ ನೀಡುತ್ತ ಶ್ರೀಗಳವರು 'ಕೂಡಲ ಸಂಗನ ಒಲಿಸಲು ಬಂದ ಪ್ರಸಾದ ಕಾಯವ ಕೆಡಿಸಲಾಗೆದು' – ಎಂಬ ಅಣ್ಣ ಬಸವಣ್ಣನವರ ಸೂಕ್ತಿಯನ್ನು ಉದಾಹರಿಸುತ್ತ ಭಾರತೀಯರಿಗೆ ಒಂದು ಪರಂಪರೆಯಿದೆ. ದೇಹವನ್ನು ದೇವಾಲಯದಂತೆ ಕಾಪಾಡಿಕೊಂಡು ಬಂದವರು ನಮ್ಮ ಪೂರ್ವಿಕರು. ಶುದ್ಧ ಶರೀರ, ಮನಗಳನ್ನು ಸದಾ ಎಚ್ಚರದಿಂದ ಕಾಯ್ದುಕೊಂಡವರು. ಜಿಹ್ವಾ ಚಾಪಲ್ಯಕ್ಕೆ ಒಳಗಾಗದೆ ಸಾತ್ವಿಕ ಆಹಾರ ಪ್ರಿಯರಾಗಿ, ವ್ಯಾಯಾಮ, ಕಾಯಕಗಳಿಂದ ನಿಯಮಬದ್ಧ ಜೀವನವನ್ನು ನಡೆಸಿದವರು. ಆಲಸ್ಯವನ್ನು ಹತ್ತಿರ ಸುಳಿಯದಂತೆ ಸದಾಕಾಲ ಕರ್ಮಶೀಲರಾಗಿ ಬಾಳಿದವರು. ಆಹಾರ-ವಿಹಾರಗಳಲ್ಲಿ ಸಚ್ಚಿಂತನೆ, ಸದಾಚಾರಿಗಳಾಗಿದ್ದರು. ಪ್ರಕೃತಿದತ್ತ ಫಲವನ್ನು ಶಿವಪ್ರಸಾದವೆಂಬ ಭಾವನೆಯಿಂದ ಸ್ವೀಕರಿಸುತ್ತಿದ್ದರು. ಕಾಲ ಬದಲಾದಂತೆ ಜೀವನ ಶೈಲಿಯಲ್ಲಿಯೂ ಬದಲಾವಣೆಗಳು ಬರಲಾರಂಭಿಸಿದವು. ನೈಸರ್ಗಿಕ ಮತ್ತು ಶ್ರಮಸಹಿತ ಉತ್ಪಾದನೆಗಳು ಯಾಂತ್ರಿಕವಾಗುತ್ತ ಬಂದಂತೆ ಒಳಿತಿನೊಂದಿಗೆ ಕೆಡುಕೂ ಬಂದಿತು. ಕೊಟ್ಟಣದ ಅಕ್ಕಿಗೆ ಬದಲು ಮಿಲ್ಲಿನ ಫಾಲಿಷ್ ಮಾಡಿದ ಅಕ್ಕಿ ಬಂತು, ಜೀವ ಸತ್ವನಷ್ಟವಾದ







ಪೂಜ್ಯ ಶ್ರೀ ಶ್ರೀ ಸಿದ್ದಲಿಂಗಸ್ವಾಮಿಗಳವರಿಂದ ಉದ್ಘಾಟನಾ ಭಾಷಣ

ಅಕ್ಕಿ ಜನಪ್ರಿಯವಾಯಿತು. ಇತ್ತೀಚಿಗಂತೆ ಸಿಲ್ಕ್‌ಪಾಲಿಷ್ ಅಕ್ಕಿಯೇ ಎಲ್ಲೆಲ್ಲೂ ಬಳಕೆಯಾಗುತ್ತಿದೆ. ನೋಟಕ್ಕೆ ಚೆಂದ ಅಷ್ಟೆ, ಊಟಕ್ಕೆ ರುಚಿರಹಿತ, ಅನ್ನಾಂಶ ಸೊನ್ನೆ. ದೇವಮಲ್ಲಿಗೆ, ಮರಳುಕಾಂತಿ, ಹಾಲುಬ್ಬಲು, ಬಂಗಾರಕಡ್ಡಿಗಳು ಕೇವಲ ನೆನಪು ಈಗ. ಪೌಷ್ಠಿಕತೆಯಿಲ್ಲದ ಪ್ರಸಾದ. ಇದು ಸಾಲದೆಂಬಂತೆ ದುಶ್ಚಟಗಳ ಹಾವಳಿ. ಕುಡಿತದ ಕುಣಿತ ಎಲ್ಲೆಲ್ಲೂ. ವೈಭವ, ಭೋಗ ಜೀವನ ಒಂದು ಕಡೆ, ಮತ್ತೊಂದು ಕಡೆ ಅನ್ನವೇ ಇಲ್ಲದ ದರಿದ್ರ ಜೀವನ. ದೇಶದಲ್ಲೀಗ ಸಾವಿರಾರು ಯೋಜನೆಗಳು. ಅದಕ್ಕಾಗಿ ಕೋಟಿ ಕೋಟಿ ರೂಪಾಯಿ ಗಳು. ವಿಜ್ಞಾನದ ಹೊಸ ಹೊಸ ಆವಿಷ್ಕಾರಗಳು. ಯುದ್ಧ ಶಸ್ತ್ರಾಸ್ತ್ರಗಳು, ಮಾರಕಾಸ್ತ್ರಗಳು. ಅದಕ್ಕಾಗಿ ಹಣದ ಹೊಳೆ ಆದರೆ ಆರೋಗ್ಯ ರಕ್ಷಣೆಗಾಗಿ, ಅನ್ನವಿಲ್ಲದವರಿಗಾಗಿ ನಾವು ಮಾಡಿದ್ದೇನು? ಮನುಷ್ಯ ನಿಯಮಬದ್ಧ ಜೀವನ ನಡೆಸಿದರೆ ಆರೋಗ್ಯ ಸಾಧ್ಯ. ಆದರೆ ಇಂದು ಎಲ್ಲೆಲ್ಲಿಯೂ ಸ್ವೇಚ್ಛಾಜೀವನ. ಆಹಾರದಲ್ಲಿ ಮಿತಿಯಿಲ್ಲ. ನಿಯಮ ಪಾಲನೆಯಿಲ್ಲ. ರಾಜಸಿಕ, ತಾಮಸಿಕ ಆಹಾರ ಪ್ರಿಯತೆಯಿಂದಾಗಿ ರೋಗಗಳ ಹೆಚ್ಚಳ ಪರಿಣಾಮವಾಗಿ ವೈದ್ಯರ, ಆಸ್ಪತ್ರೆಗಳ ಆವಶ್ಯಕತೆ. ಆಸ್ಪತ್ರೆಗಳೂ ಸಾಮಾನ್ಯ



ಪರಮಪೂಜ್ಯ ಶ್ರೀ ಶ್ರೀಗಳವರೊಂದಿಗೆ ಸಿಟಿ ಆಸ್ಪತ್ರೆಯ ತಜ್ಞ ವೈದ್ಯರುಗಳಾದ ಡಾ|| ಎಸ್.ಎ. ಕಸ್ತೂರಿ, ಡಾ|| ಸಿ.ವಿ. ದೇವರಾಜು, ಡಾ|| ಎಲ್.ಪಿ. ನಾಗರಾಜಯ್ಯ, ಡಾ||ಬಾಬು, ಡಾ|| ಎಸ್. ಸಚ್ಚಿದಾನಂದ, ಡಾ|| ಬಿ. ಜಲಜಾಕ್ಷಿ ಮತ್ತು ಡಾ|| ಎಂ.ಎನ್. ಬೋಜಮ್ಮ



ಆಸ್ಪತ್ರೆಯ ಆಡಳಿತ ಮಂಡಳಿ ಸದಸ್ಯರು
ಪರಮಪೂಜ್ಯ ಶ್ರೀ ಶ್ರೀಗಳವರ ಪಾದಪೂಜೆ ಮಾಡುತ್ತಿರುವುದು

ಮನುಷ್ಯನಿಗೆ ದುಬಾರಿಯಾಗಿರುವ ಪರಿಸ್ಥಿತಿ. ವೈದ್ಯರೆಲ್ಲಾ ಧನಮೋಹಿಗಳಲ್ಲ ಎಲ್ಲೋ ಕೆಲವರಿರಬಹುದು. ಇಂದು ಆರಂಭವಾಗುತ್ತಿರುವ 'ಸಿಟಿ ಆಸ್ಪತ್ರೆ' ಸಮಾನ ಮನಸ್ಕರಾದ ವೈದ್ಯರ ಸೌಹಾರ್ದ ಸಂಘದಿಂದ ಸೇವಾಮುಖಿ ಯಾಗುತ್ತಿರುವುದು ಶ್ಲಾಘನೀಯ. ವ್ಯವಸ್ಥಾಪಕ ನಿರ್ದೇಶಕರಾಗಿರುವ ಡಾ. ದೇವರಾಜು ಸಂಭಾವಿತರು. ಬಡವರ, ಅಸಹಾಯಕರ, ಅನಾಥರ, ಗ್ರಾಮೀಣ ಜನತೆಯ ಬಗ್ಗೆ ಕಳಕಳಿ, ಅನುಕಂಪ ಉಳ್ಳವರು. ಅನೇಕ ರೋಗಿಗಳು ಅವರನ್ನು ಪ್ರೀತಿಗೌರವಗಳಿಂದ ಕಾಣುವುದನ್ನು ತಿಳಿದಿದ್ದೇವೆ. ಅವರೊಡನಿರುವ ಎಲ್ಲ ವೈದ್ಯರೂ ಸಹ ಅವರಂತೆ ಜನಪ್ರಿಯತೆಗಳಿಸಿರುವ ಸಾಮರ್ಥ್ಯವುಳ್ಳ ನಿಷ್ಣಾತರು. ರೋಗಿಯ ಸೇವೆಯನ್ನು ದೇವರ ಸೇವೆಯೆಂದೇ ಭಾವಿಸಿರುವ ಈ ಎಲ್ಲ ತರುಣ ವಯಸ್ಕರು. ಇಂದು ಈ ನೂತನ ಸುಸಜ್ಜಿತ 'ಸಿಟಿ ಆಸ್ಪತ್ರೆ'ಯನ್ನು ಜನಸೇವೆಗೆ ಅರ್ಪಿಸುತ್ತಿರುವುದು ಸಂತೋಷ. ಸಂಸ್ಥೆಗೆ ಶುಭವನ್ನು ಹಾರೈಸುತ್ತೇವೆ ಎಂಬುದಾಗಿ ನುಡಿದರು. ಜ್ಯೋತಿ ಬೆಳಗಿಸುವುದರ ಮೂಲಕ ಆಸ್ಪತ್ರೆಯ ಉದ್ಘಾಟನೆಯನ್ನು ಶ್ರೀ ಸಿದ್ಧಗಂಗಾ ಕ್ಷೇತ್ರದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ನೆರವೇರಿಸಿದರು.

ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿ ಆಶೀರ್ವದಿಸಿದ ಕನಕಪುರ ಶ್ರೀದೇಗುಲಮಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳವರು ತಮ್ಮ ಬಾಲ್ಯದ ದಿನಗಳನ್ನು ನೆನಪು ಮಾಡಿಕೊಳ್ಳುತ್ತ 'ಮನೆಮದ್ದು' ಮಾಡುವುದರ ಮೂಲಕ ಔಷಧೋಪಚಾರ ಪದ್ಧತಿಯನ್ನು ಸಭೆಯ ಗಮನಕ್ಕೆ ತಂದರು. ಆಹಾರ ಧಾನ್ಯಗಳಲ್ಲಿ ರಾಸಾಯನಿಕ ಗೊಬ್ಬರದ ಸಂತಾನವಾಗುತ್ತಿರುವುದರಿಂದ ಅನೇಕ ರೋಗಗಳು ಬರುತ್ತಿದ್ದು ಅವುಗಳ ನಿವಾರಣೆ ಗಾಗಿ ವೈದ್ಯರುಗಳಿಂದು ಸಮರ ಸಾರಬೇಕಾ ಗಿದೆ ಎಂದು, 'ಸಿಟಿ ಆಸ್ಪತ್ರೆ' ಸಾಮಾನ್ಯ ಮನುಷ್ಯನಿಗೂ ತನ್ನ ಸೇವೆಯನ್ನು ನೀಡು ವಂತಾಗಿರುವುದು ಸ್ವಾಗತಾರ್ಹವೆಂದು ನುಡಿದರು.

ವಯಸ್ಕರ ಶಿಕ್ಷಣ ಮತ್ತು ಗ್ರಂಥಾಲಯ ಸಚಿವರಾದ ಶ್ರೀ ಬಾಬುರಾವ್ ಚವ್ಹಾಣ್, ಕರ್ನಾಟಕ ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾದ ಶ್ರೀ ಕೆ.ಎಲ್. ಮಂಜುನಾಥ್, ರಾಜಾಜಿನಗರ ವಿಧಾನಸಭಾ ಸದಸ್ಯರಾದ ಶ್ರೀ ಎಸ್. ಸುರೇಶ್‌ಕುಮಾರ್, ರಾಜಾಜಿನಗರ ವಿಭಾಗದ ಮಹಾನಗರ ಪಾಲಿಕೆ ಸದಸ್ಯರಾದ ಶ್ರೀ ಎಸ್. ರಾಜಣ್ಣ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾದ ಶ್ರೀ ಸಿ. ಸೋಮಶೇಖರ್ ಇವರುಗಳು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು.

ಸಿಟಿ ಆಸ್ಪತ್ರೆ ಇಪತ್ನಾಲ್ಕು ಘಂಟೆಗಳೂ ಸೇವಾನಿರತವಾಗಿರುತ್ತದೆ. ಅಪಘಾತ ವಿಭಾಗ, ತೀವ್ರನಿಗಾ ವಿಭಾಗ, ನವಜಾತ ಶಿಶುಗಳ ಶುಶ್ರೂಷಾ ವಿಭಾಗ, ಚರ್ಮರೋಗ ನಿವಾರಣಾ ವಿಭಾಗಗಳನ್ನು ಹೊಂದಿರುವ ಆಸ್ಪತ್ರೆ ವಿಶಾಲವಾದ ಕೊಠಡಿಗಳಿಂದ, ಔಷಧಿಯ ಅಂಗಡಿಯನ್ನು ಹೊಂದಿದ್ದು ಸುಸಜ್ಜಿತವಾಗಿದೆ.

**ಹೆಚ್ಚಿನ** ಮೆಚ್ಚುವ ವಿಷಯವೆಂದರೆ ಸಾರ್ವಜನಿಕ ಉದಾರಿಗಳು ನೀಡುವ ದೇಣಿಗೆಯಿಂದ ಬಡವರಿಗೆ ಉಚಿತವಾಗಿ ವೈದ್ಯಕೀಯ ಸೇವೆ ಸಲ್ಲಿಸುವ ವ್ಯವಸ್ಥೆಯನ್ನು ಆಸ್ಪತ್ರೆ ಯೋಜಿಸಿಕೊಂಡಿದೆ.

ವರದಿ : ಹೆಚ್.ವಿ. ವೀರಭದ್ರಯ್ಯ




ಆಗಸ್ಟ್ ೨೫ರಂದು ಬೆಂಗಳೂರಿನ ಕಾರ್ಡ್ ರಸ್ತೆಯಲ್ಲಿ ಸಂಯೋಗ ವೈದ್ಯ ಅಸೋಸಿಯೇಟ್ಸ್ ಪ್ರೈವೇಟ್ ಲಿ. ರವರು ನೂತನವಾಗಿ ನಿರ್ಮಿಸಿರುವ ಸಿಟಿ ಆಸ್ಪತ್ರೆಯನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ರಾಜ್ಯ ವಯಸ್ಕರ ಶಿಕ್ಷಣ ಸಚಿವರಾದ ಶ್ರೀ ಬಾಬುರಾವ ಚೌಹಾನ್ ಅವರು ಜ್ಯೋತಿ ಬೆಳಗಿಸಿ ಉದ್ಘಾಟಿಸುತ್ತಿರುವುದು. ಈ ಸಂದರ್ಭದಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಡಾ॥ ಬಿ. ಬಾಬು, ನ್ಯಾಯಮೂರ್ತಿ ಶ್ರೀ ಕೆ.ಎಲ್. ಮಂಜುನಾಥ್, ಡಾ॥ ಎಸ್.ಎ. ಕಸ್ತೂರಿ ಹಾಗೂ ಡಾ॥ ಎಲ್.ಪಿ. ನಾಗರಾಜಯ್ಯ ಅವರು ಉಪಸ್ಥಿತರಿದ್ದರು.

ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ